# ಸಂಡೂರು ತಾಲೂಕು

# ಆರ್ಯವೈಶ್ಯ ಸಮುದಾಯದ ಮದುವೆ ಸಂಪ್ರದಾಯಗಳು

ಎಂ.ಫಿಲ್ ಪದವಿಯ

ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ


ಸಂಶೋಧಕರು

ಎಸ್.ಕೊಟ್ರೇಶ

ಮಾರ್ಗದರ್ಶಕರು

ಡಾ. ಸ.ಚಿ. ರಮೇಶ

ಮುಖ್ಯಸ್ಥರು





ಜಾನಪದ ವಿಭಾಗ

ಕನ್ನಡ ವಿಶ್ವವಿದ್ಯಾಲಯ

ಹಂಪಿ - ೫೮೩. ೨೭೬.

೨೦೦೫.

107

# ಸಂಡೂರು ತಾಲೂಕು

# ಆರ್ಯವೈಶ್ಯ ಸಮುದಾಯದ ಮದುವೆ ಸಂಪ್ರದಾಯಗಳು

ಎಂ.ಫಿಲ್ ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ

ಸಂಶೋದಕರು
**ಎಸ್. ಕೊಟ್ರೇಶ**

ಮಾರ್ಗದರ್ಶಕರು
**ಡಾ. ಸ. ಚಿ. ರಮೇಶ**

ಜಾನಪದ ವಿಭಾಗ
ಕನ್ನಡ ವಿಶ್ವ ವಿದ್ಯಾಲಯ
ಹಂಪಿ - 583 211.

ಜನವರಿ 2005

# ಅರ್ಹತಾ ಪತ್ರ

ಶ್ರೀ. ಎಸ್. ಕೊಟ್ರೇಶ ಇವರು **"ಸಂಡೂರು ತಾಲೂಕು ವೈಶ್ಯ ಸಮುದಾಯದ ಮದುವೆ ಸಂಪ್ರದಾಯಗಳು"** ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಾದರಪಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇದರಲ್ಲಿನ ವಿಷಯವನ್ನು ಅಥವಾ ಇನ್ನಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಮತ್ತು ಉದ್ದೇಶಗಳಿಗಾಗಿ ಇವರು ಒಪ್ಪಿಸಿಲ್ಲ.

ಹಂಪಿ

೩೦/೦೪/೨೦೦೫

[ಡಾ. ಸ.ಚಿ. ರಮೇಶ]
ಮಾರ್ಗದರ್ಶಕರು
ಪ್ರವಾಚಕರು ಮತ್ತು ಮುಖ್ಯಸ್ಥರು
ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ – ೫೮೩ ೨೭೬.

# ಪ್ರಮಾಣ ಪತ್ರ

**"ಸಂಡೂರು ತಾಲೂಕು ವೈಶ್ಯ ಸಮುದಾಯದ ಮದುವೆ ಸಂಪ್ರದಾಯಗಳು"** ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಾದರಪಡಿಸಲು ಡಾ. ಸ. ಚಿ. ರಮೇಶ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗುತ್ತಿದೆ. ಈ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಯಾವುದೇ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ಹಂಪಿ

೩೦/೦೪/೨೦೦೫

[ ಎಸ್. ಕೊಟ್ರೇಶ]
ಎಂ. ಫಿಲ್ ವಿದ್ಯಾರ್ಥಿ.
ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೭೭.

# ಪರಿವಿಡಿ

# ಅದ್ಯಾಯ – 1

## 1.1 ಪ್ರವೇಶ :

ಜಾನಪದ ಸಾಹಿತ್ಯ ನಮ್ಮ ಸಮಾಜದ ಸಂಸ್ಕೃತಿ, ಇತಿಹಾಸ, ನಂಬಿಕೆಗಳನ್ನು ಶೋಧಿಸುವ ಮಾಧ್ಯಮವಾಗಿದೆ. ಸಾಹಿತ್ಯದ ಸತಿಯಾಗಿದೆ. ನಮ್ಮದು ಬದಲಾಗುತ್ತಿರುವ ಋತುಮಾನ ಯುಗದಿಂದ ಯುಗಕ್ಕೆ ಜನಪದ ಆಚಾರ ವಿಚಾರಗಳು ಭಿನ್ನವಾಗುತ್ತಲೇ ಅಳಿಸಿ ಹಾಕಿ ಬೇರೊಂದು ಸಂಸ್ಕೃತಿಯನ್ನು ಬೆಳೆಸುವಲ್ಲಿ ಫಲಕಾರಿಯಾಗಿವೆ. ಇವುಗಳ ತುಳತಕ್ಕೆ ನಮ್ಮ ಸಂಸ್ಕೃತಿಯು ಸಂಪೂರ್ಣ ಮರೆಯಾಗುವ ಹಂತದಲ್ಲಿವೆ. ಈ ನಿಟ್ಟಿನಲ್ಲಿ ಜಾನಪದವು ತನ್ನದೇ ಹೋರಾಟವನ್ನು ನಡೆಸಿ ಸಂಸ್ಕೃತಿಯನ್ನು ಉಳಿಸುವಲ್ಲಿ ಪ್ರಯತ್ನಿಸುತ್ತದೆ ಅಥವಾ ಇವುಗಳಿಗೆ ಎದುರಾಗಿ ನಿಲ್ಲುತ್ತವೆ.

ಜನಪದ ಎನ್ನುವುದು ಇಂತಿಷ್ಟೇ ಎಂದು ಮಿತಿ ಕಟ್ಟದ ವಸ್ತು ಇದಕ್ಕೆ ಎಲ್ಲೆ ಎಂಬುದಿಲ್ಲ, ಪ್ರತಿಯೊಂದು ರಂಗದಲ್ಲೂ ತನ್ನ ಪ್ರಾಬಲ್ಯತೆಯನ್ನು ಉಳಿಸಿ ಬೆಳಸಿಕೊಂಡು ಬಂದಿರುವ ಬಹುದೊಡ್ಡ ಕ್ಷೇತ್ರವಾಗಿದೆ. ಇದರಲ್ಲಿ ಅಡಗಿರುವ ವಿವಾಹ ಸಂಪ್ರದಾಯಗಳು. ವೈಶ್ಯ ಸಮುದಾಯದ ಪರಿಚಯ ಅಧ್ಯಯನದಲ್ಲಿ ಇದೆ. ಜಾನಪದ ರಂಗವು ಎಲ್ಲ ಕ್ಷೇತ್ರದಲ್ಲಿಯೂ ವ್ಯಾಪಿಸಿ ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ.

ವೈಶ್ಯರು ಎಂಬ ಹೆಸರಿನಿಂದ ಗುರುತಿಸುವ ಜನಾಂಗಗಳನ್ನು ಇಂದು ಭಾರತದಾದ್ಯಂತ ಎಲ್ಲಾ ರಾಜ್ಯಗಳಲ್ಲೂ ಕಾಣಬಹುದು. ಕರ್ನಾಟಕ ಮತ್ತು ಆಂದ್ರಪ್ರದೇಶದಲ್ಲಿ ಹೆಚ್ಚಾಗಿ ಕಂಡು ಬರುತ್ತಿದ್ದಾರೆ. ಕರ್ನಾಟಕದಲ್ಲಿ ಕೆಲವಡೆ ವಿರಳವಾಗಿಯೂ, ಕೆಲವಡೆ ದಟ್ಟವಾಗಿಯೂ ಇವರು ವ್ಯಾಪಿಸಿದ್ದಾರೆ. ಬಳ್ಳಾರಿ, ರಾಯಚೂರು, ದಾವಣಗೇರಿ, ಶಿವಮೊಗ್ಗ, ಚಿಕ್ಕಮಗಳೂರು, ತುಮಕೂರು, ಚಿತ್ರದುರ್ಗ, ಬೆಳಗಾವಿ, ಬೆಂಗಳೂರು ಜಿಲ್ಲೆಗಳ ಕೆಲವು ಪ್ರದೇಶಗಳಲ್ಲಿ ಇವರು ದಟ್ಟವಾಗಿಯೇ ಇದ್ದಾರೆ ಕರ್ನಾಟಕದ ವೈಶ್ಯ ಜನಾಂಗದವರು ಇಂದು ತಮ್ಮ ಜೀವನ ವೃತ್ತಿಗಾಗಿ ವಿವಿಧ ಕ್ಷೇತ್ರಗಳನ್ನು ಅವಲಂಬಿಸಿದ್ದಾರೆ, ಹೆಚ್ಚಾಗಿ ವ್ಯಾಪಾರವನ್ನೇ ಅಳವಡಿಸಿಕೊಂಡವರೇ ಹೆಚ್ಚು ಕೃಷಿಯನ್ನವಲಂಬಿಸಿದ ಭೂಮಾಲಿಕರೂ ಇದ್ದಾರೆ ಆರ್ಥಿಕವಾಗಿ ಚನ್ನಾಗಿ ಇದ್ದಾರೆ. ಅಲ್ಲದೆ ಕರ್ನಾಟಕ ಸರ್ಕಾರದ ಉನ್ನತ ವಲಯಗಳಲ್ಲೂ ಹಾಗೂ ಸಿನಿಮಾ ಕ್ಷೇತ್ರಗಳಲ್ಲೂ, ರಾಜಕೀಯದಲ್ಲೂ, ವಾಣಿಜ್ಯೋದ್ಯಮಗಳಲ್ಲೂ ಇಂದು ವೈಶ್ಯ ಜನಾಂಗದವರನ್ನು ಕಾಣಬಹುದು

ಕರ್ನಾಟಕದಲ್ಲೆಡೆ ವಾಸಿಸುವ ವೈಶ್ಯ ಜನಾಂಗದ ಸಾಂಸ್ಕೃತಿಕ ಮತ್ತು ಸಾಮಾಜಿಕ ಬದುಕನ್ನು ಬಹುತೇಕವಾಗಿ ಇಂದು ನಿಯಂತ್ರಿಸುವವರು ಬೆಂಗಳೂರಿನ ಶ್ರೀ ವಾಸವೀ ವಿಶ್ವಗುರು ಪೀಠಾಧಿಪತಿಗಳು ಪೂಜ್ಯಪಾದ **ಶ್ರೀ.ಶ್ರೀ.ಶ್ರೀ ಚಂದ್ರಶೇಖರಾ ನಂದಗಿರಿ** ಸ್ವಾಮಿಗಳು ವೈಶ್ಯ ಜನಾಂಗದ ಧರ್ಮಗುರುಗಳಾಗಿರುತ್ತಾರೆ.

ವೈಶ್ಯರು ಎನ್ನುವ ಸಮುದಾಯದಲ್ಲಿ ಎರಡು ಗುಂಪುಗಳನ್ನು ಕಾಣುತ್ತೇವೆ.

1. ಎಣ್ಣೆ ಶೆಟ್ರು
2. ತುಪ್ಪದ ಶೆಟ್ರು

ಎಂದು ಈ ಎರಡು ಪಂಗಡಗಳನ್ನು ಕಾಣಬಹುದು. ಈ ಜನಾಂಗದವರಿಗೆ ಈ ಹೆಸರುಗಳು ಬರಲೂ ಒಂದು ಕಥೆಯಿದೆ ಅದನ್ನು ಮುಂದಿನ ಅಧ್ಯಾಯಗಳಲ್ಲಿ ನೋಡಬಹುದು. ಈ ಎರಡೂ ಪಂಗಡಗಳಿಗೂ ಏನು ವ್ಯತ್ಯಾಸ ಕಂಡು ಬರುವುದಿಲ್ಲ ಆದರೆ ಕೆಲವೊಂದು ಸಂಪ್ರದಾಯಗಳಲ್ಲಿ ಭಿನ್ನತೆ ಕಂಡು ಬರುತ್ತದೆ. ಎಣ್ಣೆ ಶೆಟ್ರು ಮತ್ತು ತುಪ್ಪದ ಶೆಟ್ರು ಎರಡೂ ಪಂಗಡಗಳಿಗೂ ಯಾವುದೇ ವ್ಯತ್ಯಾಸ ಕಂಡು ಬರುವುದಿಲ್ಲ.

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನಲ್ಲಿ ವಾಸಿಸುವ ವೈಶ್ಯರನ್ನು ದೃಷ್ಟಿಯಲ್ಲಿರಿಸಿಕೊಂಡು ಪ್ರಸ್ತುತ ಅಧ್ಯಯನವನ್ನು ಮಾಡಲಾಗಿದೆ. ಸಂಡೂರು, ತೋರಣಗಲ್ಲು, ತಾರಾನಗರ, ಯಶವಂತನಗರ, ಬಂಡ್ರಿ ಚೋರುನೂರು, ಸೋವೇನಹಳ್ಳಿ, ಬೊಮ್ಮಘಟ್ಟ ಪ್ರದೇಶಗಳಲ್ಲಿ ವೈಶ್ಯರು ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ, ಇಲ್ಲಿ ವಾಸಿಸುವ ವೈಶ್ಯ ಜನರಲ್ಲಿ ಆರ್ಥಿಕವಾಗಿ ಚನ್ನಾಗಿ ಇದ್ದಾರೆ ಸ್ವಲ್ಪ ಪ್ರಮಾಣದಲ್ಲಿ ದುರ್ಬಲ ವರ್ಗದವರೂ ಇದ್ದಾರೆ ಹಾಗೂ ಶೈಕ್ಷಣಿಕವಾಗಿ ತಕ್ಕಮಟ್ಟಿಗೆ ಕಂಡು ಬರುತ್ತಾರೆ. ಇಲ್ಲಿನ ವೈಶ್ಯ ಜನಾಂಗದವರು ಜೀವನಾಧಾರಕ್ಕಾಗಿ ಇಂದು ವಿವಿಧ ವೃತ್ತಿಗಳನ್ನು ಅವಲಂಬಿಸಿದ್ದಾರೆ. ಅದರಲ್ಲಿ ಹೆಚ್ಚಾಗಿ ವ್ಯಾಪಾರ ವೃತ್ತಿಯನ್ನು ಅವಲಂಬಿಸಿದವರೇ ಹೆಚ್ಚು ವರ್ಗಗಳು ಕಂಡು ಬಂದಿವೆ.

ವೈಶ್ಯರು ಮತ್ತು ಇತರೆ ಯಾವ ಜನಾಂಗದವರಿಗೂ ಉಡುಗೆ ತೊಡುಗೆಗಳಲ್ಲಿ ಯಾವುದೇ ರೀತಿಯ ವ್ಯತ್ಯಾಸಗಳು ಕಂಡು ಬರುವುದಿಲ್ಲ. ಸಾಮಾಜಿಕ ವಲಯದಲ್ಲೂ ಇವರು ಇತರರಿಂದ ಜನಾಂಗಿಕ ಭಿನ್ನರಾಗಿ ಉಳಿದಿಲ್ಲ. ಧಾರ್ಮಿಕ ಆಚರಣೆಗಳಲ್ಲಿ ಬೇರೆ ಸಮುದಾಯಗಳಿಗಿಂತ ಇವರು ಭಿನ್ನರಾಗಿದ್ದಾರೆ. ಈ ಪ್ರದೇಶಗಳಲ್ಲಿ ವಾಸಿಸುವ ವೈಶ್ಯ ಸಮುದಾಯದವರು ತಮ್ಮ

ಆಚರಣೆ ಮತ್ತು ಸಂಪ್ರದಾಯಗಳು ವಿಶಿಷ್ಟವಾದ ರೀತಿಯಲ್ಲಿವೆ. ಈ ಪ್ರದೇಶದ ವೈಶ್ಯರು, ಆಂಜನೇಯ, ಶ್ರೀ ವಾಸವಿ ಕನ್ನಿಕಾಪರಮೇಶ್ವರಿ, ಶ್ರೀ ನಗರೇಶ್ವರ, ಶ್ರೀ ಸತ್ಯನಾರಾಯಣಸ್ವಾಮಿ, ನವಗ್ರಹಗಳು ಹಾಗೂ ಗ್ರಾಮ ದೇವತೆಗಳನ್ನು ಆರಾಧಿಸುತ್ತಾರೆ. ಜೊತೆಗೆ ಸ್ಥಳದೇವತೆಗಳನ್ನು ಆರಾಧಿಸುವುದಿದೆ. ಆದರೆ ಕರ್ನಾಟಕದ ಇತರಡೆಗಳಲ್ಲಿ ತಿರುಪತಿ ಶ್ರೀ ವೆಂಕಟೇಶ್ವರ, ಲಕ್ಷ್ಮಿ, ಪದ್ಮಾವತಿ, ಶ್ರೀ ವೀರಭದ್ರೇಶ್ವರ ದೇವತೆಗಳನ್ನು ಪೂಜಿಸುತ್ತಾರೆ. ಹಾಗಾಗಿ ಕರ್ನಾಟಕದ ಎಲ್ಲಾ ಭಾಗಗಳಲ್ಲೂ ವೈಶ್ಯ ಸಮುದಾಯಗಳಲ್ಲಿನ ಧಾರ್ಮಿಕ ಕ್ರಿಯಾ ಆಚರಣೆಗಳಲ್ಲಿ ಪ್ರಾದೇಶಿಕ ಭಿನ್ನತೆಯನ್ನು ಗುರುತಿಸುವುದು ಸಾಧ್ಯವಿದೆ.

ಸಂಡೂರು ಪ್ರದೇಶದ ವೈಶ್ಯರ ಸಾಂಸ್ಕೃತಿಕ ಬದುಕಿನ ಮೇಲೆ ಬೇರೆ ರಾಜ್ಯವಾದ ಆಂದ್ರಪ್ರದೇಶದಲ್ಲಿ ವಾಸಿಸುವ ವೈಶ್ಯರ ಪ್ರಭಾವವಾಗಿರುವುದು ಇದೆ. ಆಂದ್ರದಲ್ಲಿರುವ ವೈಶ್ಯರ ಜೊತೆಗೆ ಈ ಪ್ರದೇಶದ ವೈಶ್ಯರು ಕಳೆದ ಸುಮಾರು ವರ್ಷಗಳಿಂದ ವೈವಾಹಿಕ ಸಂಬಂಧ ಮತ್ತು ವ್ಯಾಪಾರ ಸಂಬಂಧವನ್ನು ಬೆಳೆಸುತ್ತಾ ಬಂದಿದ್ದಾರೆ. ಆಂಧ್ರದ ವೈಶ್ಯರು ತೆಲಗು ಮಾತನಾಡುತ್ತಾರೆ. ಕರ್ನಾಟಕದ ವೈಶ್ಯರು ಕೆಲವರು ತೆಲುಗು ಬಾಷೆಯನ್ನು ಮಾತನಾಡುತ್ತಾರೆ. ಪ್ರಸ್ತುತ ಪ್ರಬಂಧದಲ್ಲಿ ಅವುಗಳನ್ನು ವಿಸ್ತರಿಸಿದೆ ಸಂಡೂರು ಪ್ರದೇಶದ ವೈಶ್ಯರ ಸಮುದಾಯದಲ್ಲಿನ ಸಾಂಪ್ರದಾಯಿಕ ಮದುವೆಯ ಸಾಂಸ್ಕೃತಿಕ ವಿಶ್ಲೇಷಣೆಯನ್ನು ಮಾಡಲಾಗಿದೆ.

## 1.2 ಪ್ರಸ್ತುತ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಜಾನಪದ ಅಧ್ಯಯನವು ಮೊದಲು ಸಂಗ್ರಹ ರೂಪದಲ್ಲಿ ಮಾತ್ರ ತನ್ನ ವ್ಯಾಪ್ತಿಯನ್ನು ಹೊಂದಿತ್ತು ಆದರೆ ಇತ್ತೀಚಿನ ದಿನಗಳಲ್ಲಿ ವೈಜ್ಞಾನಿಕವಾಗಿ, ಶಾಸ್ತ್ರೀಯ ಶಿಸ್ತುಬದ್ದ ಕ್ರಮದಿಂದಾಗಿ ಸಂಪ್ರದಾಯಗಳು, ಗ್ರಾಮ, ಜಾತ್ರೆ, ಜನಾಂಗ, ಹಬ್ಬ, ಆಚರಣೆ, ಬುಡಕಟ್ಟು ಮತ್ತು ಜನಾಂಗಗಳ ಸಂಪ್ರದಾಯಗಳ ಅಧ್ಯಯನಗಳು ನಡೆಯುತ್ತವೆ.

ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುವ ಆಕರಗಳನ್ನು ಸಂಪ್ರದಾಯಗಳನ್ನು ಸಾಂಸ್ಕೃತಿಕ ಚರಿತ್ರೆಯ ಹಿನ್ನಲೆಯಲ್ಲಿ ಪುನಃ ರಚಿಸುವುದು ಇಂದು ಅನಿವಾರ್ಯವಾಗಿದೆ. ಇಂದು ಜಗತ್ತಿನ ಎಲ್ಲಾ ವಿಧಿ-ವಿಧಾನಗಳು ಆಧುನೀಕರಣದ ಪ್ರಭಾವಕ್ಕೊಳಗಾಗಿ ವಿವಿಧ ರೀತಿಯ ಪ್ರಕ್ರಿಯೆಗಳಿಂದ ಹಾಗೂ ವಿಜ್ಞಾನದ ಹೊಸ ಹೊಸ ಅವಿಷ್ಕಾರಗಳಿಂದ ತನ್ನದೇ ಅದ ಬದಲಾವಣೆಗೊಳಗಾಗಿ ಹೊಸರೂಪ ಪಡೆಯುತ್ತಿವೆ. ಪ್ರತಿಯೊಂದು ಸಮುದಾಯವು ತನ್ನ ಸ್ವಂತಿಕೆಯನ್ನು ಮರುರೂಪಿಸಲು

ಪರಂಪರಾನುಗತವಾಗಿ ಬಂದಂತಹ ಕೆಲವು ಸಾಂಸ್ಕೃತಿಕ ಮಹತ್ವಗಳ ಬಗ್ಗೆ ಮತ್ತು ಸಂಪ್ರದಾಯಗಳ ಬಗ್ಗೆ ಅಧ್ಯಯನ ಮಾಡಬೇಕಾಗುದುದು ಅತ್ಯವಶ್ಯಕವಾಗಿದೆ.

ಗ್ರಾಮಗಳ ಸಂಪ್ರದಾಯಗಳಿಗೆ ಸಂಬಂಧಿಸಿದ ಹಾಗೂ ಅಲ್ಲಿನ ಜನಪದರಲ್ಲಿ ಬಹಳ ಹಿಂದಿನಿಂದ ನಡೆದುಕೊಂಡು ಬಂದ ಆಚರಣೆಗಳು ಸಂಪ್ರದಾಯಗಳು ತುಂಬ ಮಹತ್ವ ಪಡೆದುಕೊಂಡು ಬಂದಿರುತ್ತವೆ. ಇಂದಿನ ಗ್ರಾಮಗಳ ಆಧುನಿಕ ನಾಗರಿಕತೆಯ ಪ್ರಭಾವಕ್ಕೊಳಗಾಗಿ ಸಂಸ್ಕೃತಿಯಲ್ಲಿ ಸಂಪ್ರದಾಯಗಳಲ್ಲಿ ಬದಲಾವಣೆಗಳಾಗುತ್ತಿವೆ. ಇಂತಹ ಸಂಕ್ರಮಣಾವಸ್ಥೆಯ ಸಂದರ್ಭದಲ್ಲಿ ಮೂಲೆ ಗುಂಪಾಗುತ್ತಿರುವ ಗ್ರಾಮ ಪರಿಸರ ಹಾಗೂ ಅಲ್ಲಿನ ಜನಾಂಗಗಳ ಸಂಪ್ರದಾಯಗಳ ಕುರಿತಾಗಿ ಅಧ್ಯಯನ ಮಾಡುವ ಕೆಲಸ ತುಂಬ ಮಹತ್ವಪೂರ್ಣವಾದುದಾಗಿದೆ.

ಆದಿಮಾನವ ತನ್ನ ಸಂಸ್ಕೃತಿ ವಿಕಾಸಗೊಂಡಾಗ ಕೆಲವು ಸಾಮಾಜಿಕ ಕೌಟುಂಬಿಕ ವ್ಯವಸ್ಥೆಗಳನ್ನು ರೂಡಿಸಿಕೊಂಡ. ಈ ವ್ಯವಸ್ಥೆಯ ಒಳಗೆ ಅನೇಕ ಆಚರಣೆಗಳ ಮೂಲಕ ತನ್ನ ಅಸ್ತಿತ್ವವನ್ನು ಸಮಾಜದಲ್ಲಿ ಗುರುತಿಸಿಕೊಂಡ ಮನುಷ್ಯ ಹುಟ್ಟಿನಿಂದ ಸಾಯುವತನಕ ಅನೇಕ ಸಂಸ್ಕಾರಗಳ ಮೂಲಕ ತನ್ನ ಬದುಕಿನ ವ್ಯವಸ್ಥೆಗೆ ಒಂದು ಚೌಕಟ್ಟನ್ನು ಧಾರ್ಮಿಕ, ಸಾಮಾಜಿಕ ಮಹತ್ವವನ್ನು ಕಲ್ಪಿಸಿಕೊಂಡ ಇವುಗಳಲ್ಲಿ ಮದುವೆಯೂ ಒಂದು ಪ್ರಮುಖ ಹಂತ, ಮದುವೆ ಎಂದರೆ ಹೆಣ್ಣು–ಗಂಡನ್ನು ಜೊತೆ ಗೂಡಿಸುವುದು ಅಷ್ಟೆ ಅಲ್ಲ. ಹೆಣ್ಣು ಗಂಡು ಜೊತೆಗೂಡಿ ಬಾಳುವುದಕ್ಕೆ ಹತ್ತಾರು ಜನರು ಬಹಿರಂಗವಾಗಿ ಕೊಡುವ ಅನುಮತಿಯೂ ಅಲ್ಲ. ಮದುವೆ ಎಂಬದೊಂದು ವಿಶಿಷ್ಟ ಸಂಸ್ಕಾರ, ವಿವಾಹವು ಕುಟುಂಬಕ್ಕೆ ಪೂರಕವಾದ ಸಂಸ್ಥೆಯಾಗಿದೆ ವಿವಾಹವು ಇಂದು–ನಿನ್ನೆಯದಲ್ಲ, ವಿವಾಹದ ವಿಧಿವಿಧಾನಗಳು ರೀತಿ–ನೀತಿಗಳು ಹಾಗೂ ನಿರ್ಬಂಧ ಮತ್ತು ಪ್ರಕಾರಗಳು ಸಮೂಹದಿಂದ ಸಮೂಹಕ್ಕೆ ಭಿನ್ನವಾಗುತ್ತದೆ. ವ್ಯಕ್ತಿಯ ಬದುಕಿನಲ್ಲಿ ಈ ಮದುವೆ ಎನ್ನುವ ಸಂಸ್ಕಾರ ಆತನ ಇಡೀ ಬದುಕಿನ ಮೇಲೆ ಅಗಾಧವಾದ ಪರಿಣಾಮವನ್ನು ಬೀರುತ್ತದೆ. ಈ ದೃಷ್ಠಿಯಿಂದ ಒಬ್ಬನ ವ್ಯಕ್ತಿತ್ವದ ಮಹತ್ವಕೂಡ ಈ ಮದುವೆ ಎಂಬ ಸಂಸ್ಕಾರವನ್ನೇ ಅವಲಂಬಿಸಿರುತ್ತದೆ. ಆದ್ದರಿಂದ ಒಟ್ಟು ಮಾನವ ಸಮಾಜದ ಸಂಸ್ಕೃತಿಯಲ್ಲಿ ಮದುವೆ ಎಂಬ ಸಂಸ್ಕಾರ ವೈಶಿಷ್ಟ್ಯಪೂರ್ಣವಾಗಿದೆ. ಮದುವೆ ಸಂದರ್ಭದ ಧಾರ್ಮಿಕ, ಕೌಟುಂಬಿಕ, ಸಾಮಾಜಿಕ ಆಚರಣೆಗಳು ಒಟ್ಟು ಮಾನವ ಜನಾಂಗದ ಸಂಸ್ಕೃತಿ ದತ್ತವಾದವುಗಳಾಗಿರುತ್ತವೆ. ಈ ಅರ್ಥದಲ್ಲಿ ಸಾಂಪ್ರದಾಯಿಕ ಮದುವೆಯ ಅಧ್ಯಯನಕ್ಕೆ ಒಂದು ಜನಾಂಗದ ಸಂಸ್ಕೃತಿಯ ಅಧ್ಯಯನದ ಮಹತ್ವವಿದೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಪ್ರಬಂಧದಲ್ಲಿ ಸಂಡೂರು ತಾಲೂಕಿನ ವೈಶ್ಯರ ಜನಾಂಗದ

ಆಚರಣೆಯಲ್ಲಿರುವ ಮದುವೆಯ ಸಂಪ್ರದಾಯಗಳನ್ನು ಕುರಿತು ವಿವೇಚಿಸಾಲಗಿದೆ ಪ್ರಬಂಧದಲ್ಲಿ ಸಾಂಪ್ರದಾಯಿಕ ಮದುವೆ ಅಧ್ಯಯನ ಮಾಡುವಾಗ ಇಲ್ಲಿ ಸಾಂಸ್ಕೃತಿಕವಾಗಿ ಹೆಚ್ಚು ಒತ್ತು ಕೂಡಲಾಗಿದೆ. ಈ ಅಧ್ಯಯನದಲ್ಲಿ ಸಂಡೂರು ತಾಲೂಕಿನ ಒಟ್ಟು ಮಾನವ ಸಮುದಾಯ ಮಧ್ಯೆ ವೈಶ್ಯ ಜನಾಂಗದ ಮದುವೆ ಆಚರಣೆಗಳು ಹೇಗೆ ವಿಶಿಷ್ಠವಾಗುತ್ತವೆ. ಎಂಬುದರತ್ತ ಕೇಂದ್ರ ಗಮನವಿದೆ.

ವೈಶ್ಯರ ಜನಾಂಗದಲ್ಲಿ ಮದುವೆ ಸಂಸ್ಕಾರಕ್ಕೆ ಮುನ್ನ ಮತ್ತು ಮದುವೆಯ ತರುವಾಯದ ಆಚರಣೆಗಳನ್ನು ಸಹ ಅಧ್ಯಯನದ ವ್ಯಾಪ್ತಿಯಲ್ಲಿ ಅಳವಡಿಸಿಕೊಳ್ಳಲಾಗಿದೆ. ಹೆಣ್ಣು ನೋಡುವದರಲ್ಲಿಂದ ಆರಂಭಿಸಿ ಪ್ರಸ್ತದವರೆಗಿನ ಆಚರಣೆಗಳನ್ನು ದೃಷ್ಠಿಯಲ್ಲಿರಿಸಿಕೊಂಡು ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ.

ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಸ್ವತಃ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಅನುಕೂಲವಾಗುವ ಹಾಗೆ ಸಂಡೂರು ನಗರಸಭೆ ವ್ಯಾಪ್ತಿಯಲ್ಲಿ ನೆಲಸಿರುವ ವೈಶ್ಯರಿಂದಲೂ ಬಂಡ್ರಿ, ಚೋರನೂರು, ಯಶವಂತನಗರ, ಬೊಮಘಟ್ಟ, ಸೋವೇನಹಳ್ಳಿಗಳಲ್ಲಿ ನೆಲಸಿರುವ ವೈಶ್ಯರಿಂದ ಮಾಹಿತಿಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ.

# ಅಧ್ಯಾಯ - ೨

## ಪ್ರಸ್ತಾವನೆ

೨.೧ ವೈಶ್ಯ ಸಮುದಾಯದ ಭೌಗೋಳಿಕ ಪರಿಸರ
೨.೨ ವೈಶ್ಯರ ಪೌರಾಣಿಕ ಹಿನ್ನಲೆ ಮತ್ತು ಆರಾಧ್ಯ ದೇವತೆ ವಾಸವಿಯ ಚರಿತ್ರೆ
೨.೩ ವೈಶ್ಯ ಪರಂಪರೆ
೨.೪ ವೈಶ್ಯ ಸಮುದಾಯದ ಪೂರ್ವ ಪರಿಚಯ
೨.೫ ವೈಶ್ಯ ಸಮುದಾಯದ ಕುಟುಂಬ ಪದ್ಧತಿ.

# ಅಧ್ಯಾಯ – 2

# ವೈಶ್ಯ ಸಮುದಾಯದ ಪರಿಚಯ

ಆರ್ಯ ವೈಶ್ಯರು ಬಹಳ ಹಿಂದಿನ ಕಾಲದಿಂದಲೂ ವೈಭವ ಪೂರಿತವಾಗಿ ಜೀವನ ನೆಡೆಸುತ್ತಿದ್ದಾರೆ. ಧಾನ ಧರ್ಮಗಳಿಗೆ, ಔದಾರ್ಯಕ್ಕೆ ಧೈರ್ಯ, ಸಾಹಸಗಳಿಗೆ ಹೆಸರಾಗಿದ್ದಾರೆ. ಒಂದು ದೇಶದ ಸಂಪತ್ತೆಂದರೆ ಅಲ್ಲಿನ ಇತಿಹಾಸ ಸಂಸ್ಕೃತಿಯೇ ಹೊರತು ಅಲ್ಲಿಯ ಕಲ್ಲು, ನೆಲ, ಜಲ ಮಾತ್ರವೇ ಅಲ್ಲ. ಆರ್ಯ ವೈಶ್ಯರು ತಮ್ಮ ಪೂರ್ವಿಕರ ಇತಿಹಾಸ ಹಿರಿಮೆಗಳನ್ನು ತಿಳಿಯುವುದು ಅವಶ್ಯ. ಈ ನಿಟ್ಟಿನಲ್ಲಿ ವೈಶ್ಯ ಸಮುದಾಯದ ಇತಿಹಾಸ ಮತ್ತು ಹಿರಿಮೆಗಳನ್ನು ಪರಿಚಯಿಸುವುದೇ ಆಗಿದೆ.

ಪುರಾಣ ಕಾಲದಿಂದಲೂ ಬಂದಂತಹ ಈ ಚತುರ್ವಣಗಳಲ್ಲಿ ಈ ಜನಾಂಗವೂ ಒಂದಾಗಿದೆ. ಬ್ರಹ್ಮನ ಮುಖದಿಂದ ಬ್ರಾಹ್ಮಣರು, ಭುಜದಿಂದ ಕ್ಷತ್ರಿಯರು ತೊಡೆಗಳಿಂದ ವೈಶ್ಯರು ಪಾದಗಳಿಂದ ಶೂದ್ರರು ಹುಟ್ಟಿದೆರೆಂದು ವೇದ ಪುರಾಣಗಳು ಹೇಳುತ್ತವೆ. ತರುವಾಯ ವೇದ ಪಾಲನೆಯಲ್ಲಿ ಬ್ರಾಹ್ಮಣರನ್ನೂ ಪ್ರಜಾ ರಕ್ಷಣೆಯಲ್ಲಿ ಕ್ಷತ್ರಿಯರನ್ನೂ, ವ್ಯಾಪಾರ, ಕೃಷಿ, ಪಶು ಸಂಗೋಪನೆಯಲ್ಲಿ ವೈಶ್ಯರನ್ನೂ, ಸಮುಷ್ಠಿಯಾದ ಈ ಬ್ರಾಹ್ಮಣ, ಕ್ಷತ್ರಿಯ ವೈಶ್ಯರ ಅನುಸರಣೆಯಲ್ಲಿ ಶೂದ್ರರನ್ನು ನೇಮಿಸಿದನೆಂದು ಈ ಪುರಾಣಗಳು ಹೇಳುತ್ತವೆ. ಅನಂತರ ತನ್ನ ಜೇಷ್ಠ ಪುತ್ರನಾದ ಅಂಗೀರಸನನ್ನು ಬ್ರಾಹ್ಮಣ ಗುರುಗಳಾಗಿಯೂ ತನ್ನ ಮಾನವ ಪುತ್ರ ವಸಿಷ್ಠನನ್ನು ಕ್ಷತ್ರಿಯ ಗುರುವಾಗಿಯೂ ತನ್ನ ಮತ್ತೊಬ್ಬ ಮಾನವ ಪುತ್ರನಾದ ಅಪರಾರ್ಕನನ್ನು "ವೈಶ್ಯ ಶಿಕ್ಷಕ" ನನ್ನಾಗಿಯೂ ನಿಯಮಿಸಿ ಕರ್ಮಭೂಮಿಗೆ ಹೋಗಿ ತಮ್ಮ ತಮ್ಮ ಕೆಲಸಗಳನ್ನು ನಿರ್ವಹಿಸಲು ಅಜ್ಞಾಪಿಸಿದರು.

ಈ ರೀತಿ ವೈಶ್ಯರು ಬ್ರಹ್ಮನ ಮಾನಸ ಪುತ್ರನಾದ ಅಪರಾರ್ಕ ಋಷಿಯನ್ನು ಶಿಕ್ಷಕರಾಗಿ ಪಡೆದು ಕೀರ್ತಿವಂತರಾದರು. ಬ್ರಾಹ್ಮಣ, ಕ್ಷತ್ರಿಯ, ಗೋತ್ರಕ್ಕಿಂತಲೂ ವೈಶ್ಯರ ಗೋತ್ರಗಳು ಹೆಚ್ಚಾಗಿರುವುದೆಂದೂ ಪುರಾಣಗಳಿಂದ ತಿಳಿದು ಬಂದಿದೆ, ಅಪರಾರ್ಕಮುನಿಗಳ ಮಾರ್ಗದರ್ಶನದಂತೆ ವೈಶ್ಯರ ಕುಲವೃತ್ತಿಗಳೆಂದರೆ ಕೃಷಿ, ಪಶುಸಂಗೋಪನೆ ಮತ್ತು ವ್ಯಾಪಾರವಾಗಿರುತ್ತದೆ.

ವೈಶ್ಯರು ಗೋವು ಮತ್ತು ಬ್ರಾಹ್ಮಣರ ರಕ್ಷಕರಾಗಿರುತ್ತಾರೆ. ವೈಶ್ಯರಿಗೆ ಕೋಮಟಿ ಎಂಬ ಹೆಸರಿದೆ, ಕೋಮಟಿ ಶಬ್ದವು " ಗೋಮತಿ" ಶಬ್ದದಿಂದ ಹುಟ್ಟಿದೆ. ಗೋ ಮತಿರವ ಮತಿಃಯೇಷಾಂತೇ ಗೋಮತಯಃ ಆಂದರೆ ವೈಶ್ಯರು ಗೋವಿನಂತಹ ಬುದ್ದಿಯುಳ್ಳವರೆಂದೂ ವೈಶ್ಯರಿಗೂ ಗೋವುಗಳಿಗೂ, ಸಾಮ್ಯವಿರುವುದೆಂದೂ ತಿಳಿದುಬರುತ್ತದೆ. ಬ್ರಹ್ಮನು ವೈಶ್ಯರ ಜೊತೆಗೆ ಗೋವನ್ನು ಸೃಷ್ಠಿಮಾಡಿದನೆಂದು ವೇದ ಹೇಳುತ್ತದೆ. ಜ್ಯೋತಿಷ್ಯ ಗ್ರಂಥಗಳಲ್ಲಿ ನವಗ್ರಹಗಳಲ್ಲಿರುವ ಬುಧ ಚಂದ್ರರು ವೈಶ್ಯರೆಂದು ತಿಳಿದು ಬಂದಿದೆ.

### ▫ ಅಯ್ಯರವರ ಪ್ರಕಾರ ವೈಶ್ಯ ಸಮುದಾಯದ ಪರಿಚಯ :

ಶೆಟ್ಟಿ ಅಥವಾ ಕೋಮಟೆಗಳೆಂದು ಪರಿಚಿತರಾಗಿರುವ ವೈಶ್ಯರು ತುಪ್ಪದ ಕೋಮಟಿ ಮತ್ತು ಎಣ್ಣೆ ಕೋಮಟಿಗಳೆಂದು ಎರಡು ಉಪ ಪಂಗಡಗಳನ್ನು ಹೊಂದಿದ್ದಾರೆ. ಐಯ್ಯರ್ 1930 ಬರೆಯುವಮತೆ ಕೋಮಟಿಗಳು ತಾವು ಪ್ರಾಚೀನ ವೈಶ್ಯ ಪಂಗಡದ ಪ್ರತಿನಿಧಿಗಳೆಂದು ಹೇಳುತ್ತಾರೆ. ಇವರು ಸಾಮಾನ್ಯವಾಗಿ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಕಂಡು ಬರುತ್ತಾರೆ. ಇವರಲ್ಲಿ ಋಷಿಗಳ ಹೆಸರಿನಲ್ಲಿ ನೂರ ಎರಡಕ್ಕೂ ಹೆಚ್ಚಿನ ಗೋತ್ರಗಳು ಕಂಡು ಬರುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಗುರುತಿಸಲಾಗಿದೆ.

- ಪ್ರಭಾತ ಮಹರ್ಷಿ
- ಗೋಪಕ ಮಹರ್ಷಿ
- ಪೂತಿಮಾಷ ಮಹರ್ಷಿ
- ಪ್ರಭಾತನ ಮಾಂಡವ್ಯ ಮಹರ್ಷಿ
- ಅಂಗೀರಸ ಮಹರ್ಷಿ
- ದಾಲಭ್ಯ ಮಹರ್ಷಿ
- ದೇವಲ್ಕ್ಯ ಮಹರ್ಷಿ
- ಕಶ್ಯಪ ಮಹರ್ಷಿ
- ಸರತ್ಕಾರ ಮುನಿ
- ಮೌದ್ಗಲ್ಯಮುನಿ
- ಮೌದ್ಗಲ್ಯಸ
- ಕರ್ಣಮುನಿ
- ಧೌಮ್ಯ ಮಹರ್ಷಿ

ಹೀಗೆ ಅನೇಕ ಗೋತ್ರ ಇವರಲ್ಲಿ ಗುರುತಿಸಬಹುದು. ಇತ್ತೀಚೆಗೆ ಇವರು ಆರ್ಯವೈಶ್ಯರೆಂದು ಕರೆದು ಕೊಂಡಿದ್ದಾರೆ. ಈ ಸಮುದಾಯವು ಪಿತೃನಡವಳಿಯ ಹೊರ ಭಾಂದವ್ಯದ ಗೋತ್ರಗಳನ್ನು ಹೊಂದಿವೆ. ಸೋದರಮಾವನ ಮಗಳು ಮತ್ತು ಅಕ್ಕನ ಮಗಳೊಂದಿಗೆ ವಿವಾಹಕ್ಕೆ ಸಮ್ಮತಿ ಇದೆ. ಅವಿಭಕ್ತ ಕುಟುಂಬ ಮಾದರಿಗಳು ಇವರಲ್ಲಿ ಹೆಚ್ಚಿನ ಪ್ರಮಾಣದಲ್ಲಿವೆ. ಇವರಲ್ಲಿ ಕೆಲವರು ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಲ್ಲಿ ನೌಕರಿ, ಬ್ಯಾಂಕ್ ವ್ಯಾಪಾರ, ಸ್ವಯಂ ಉದ್ಯೋಗ, ಸಣ್ಣ ಹಾಗೂ ದೊಡ್ಡ ಪ್ರಮಾಣದ ಉದ್ದಿಮೆಗಳನ್ನು ನೆಡಸುವುದರಲ್ಲಿ ನಿರತರಾಗಿದ್ದಾರೆ. ತಮ್ಮ ಸಮುದಾಯದ ಅಭಿವೃದ್ದಿಗಾಗಿ ಅಖಿಲ ಭಾರತ ವೈಶ್ಯ ಸಂಘಟನೆಯನ್ನು ರಾಜ್ಯ ಜಿಲ್ಲೆ ಹಾಗೂ ತಾಲೂಕು ಮಟ್ಟದ ಸಂಘಟನೆಯನ್ನು ಸಹ ಹೊಂದಿದ್ದಾರೆ. ಇವರು ನಾಗ, ವಿಷ್ಣು, ನಾರಾಯಣ, ಕನ್ನಿಕಾಪರಮೇಶ್ವರಿ, ವೆಂಕಟೇಶ್ವರ ದೈವಗಳನ್ನು ಪೂಜಿಸುತ್ತಾರೆ.

ಆಧುನಿಕ ಶಿಕ್ಷಣದ ಬಗ್ಗೆ ಆಸಕ್ತಿ ಇರುವ ಈ ಸಮುದಾಯದ ಜನರ ಎಲ್ಲಾ ಆಧುನಿಕ ಸಾಮಾಜಿಕ ವ್ಯವಸ್ಥೆಗಳ ಹಾಗೂ ಅಭಿವೃದ್ಧಿಕಾರ್ಯ ಕ್ರಮಗಳ ಸೌಲಭ್ಯಗಳನ್ನು ಬಳಸಿಕೊಳ್ಳುತ್ತಿದ್ದಾರೆ. ವಲಸಿಗರು ಹಾಗೂ ಅಲ್ಪ ಸಂಖ್ಯಾತರಾದ ಇವರು ಸಾಂಸ್ಕೃತಿಕವಾಗಿ ಅನೇಕ ದ್ವಂದ್ವಗಳನ್ನು ಎದುರಿಸುವುದಲ್ಲದೆ, ಸಾಮಾಜಿಕವಾಗಿ, ಆರ್ಥಿಕವಾಗಿ ಬಿಕ್ಕಟ್ಟಿನ ಸ್ಥಿತಿಯಲ್ಲಿದ್ದಾರೆ. ವಲಸೆ ಬಿಟ್ಟು ಮನುಕುಲದ ಲಕ್ಷಣ ಆರ್ಯರು ಮಧ್ಯ ಏಷ್ಯಾದಿಂದ ವಲಸೆ ಬಂದರು ಎನ್ನುವುದರಿಂದ ಪ್ರಾರಂಭವಾಗಿ ಇಂದಿನ ಭಾರತೀಯರು ಅಮೇರಿಕಾಕ್ಕೆ ವಲಸೆ ಹೋಗುತ್ತಿರುವುದರವರೆಗೆ ವಲಸೆ ನಿರಂತರವಾಗಿ ರಾಜಕೀಯ–ಬೌಗೋಳಿಕ ಗಡಿಗಳನ್ನು ದಾಟಿ ನಡೆಯುತ್ತದೆ. ದೇಶ–ಭಾಷೆ–ಧರ್ಮ–ರಾಷ್ಟ್ರೀಯತೆ ಪ್ರಶ್ನೆಗಳು ಬಂದಾಗಲೆಲ್ಲಾ ವಲಸಿಗ ಸಮುದಾಯಗಳು ಬಿಕ್ಕಟ್ಟಿಗೆ ಸಿಲುಕಿಕೊಳ್ಳುತ್ತವೆ. ಅಲ್ಪಸಂಖ್ಯಾತ ವಲಸಿಗರು ಹೇಗೆ ಸಮಸ್ಯೆಯನ್ನು ನಿಭಾಯಿಸುತ್ತಾರೆ ಎಂಬುದನ್ನು ಈ ಜನಾಂಗದ ಹಿನ್ನಲೆಯಲ್ಲಿ ಗಮನಿಸಲಾಗಿದೆ. ಕುಲಕಸುಬನ್ನು ಕಳೆದುಕೊಂಡು ಈ ಸಮುದಾಯಗಳು ಸರ್ಕಾರ ಕೈಗೊಂಡ ಶೈಕ್ಷಣಿಕ, ಔದ್ಯೋಗಿಕ, ಅಭಿವೃದ್ದಿ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕಾಗಿತ್ತು. ಆದರೆ ಭಾಷಾ ಅಲ್ಪಸಂಖ್ಯಾತರಾದ ಇವರು ಮೀಸಲಾತಿ ಸೌಲಭ್ಯಪಡೆಯುವಲ್ಲಿ ಅನೇಕ ಗೊಂದಲಗಳನ್ನು ಎದುರಿಸುತ್ತಿದ್ದಾರೆ. ಇಂದಿನ ಜಾಗತೀಕರಣ, ಉದಾರೀಕರಣ ಪ್ರಕ್ರಿಯೆಯಲ್ಲಿ ಈ ಸಮುದಾಯ ಜೀವನ ನಿರ್ವಹಣೆಗಾಗಿ ಆಯ್ಕೆ ಮಾಡಿಕೊಂಡ ವ್ಯಾಪಾರ ಅಸ್ಥಿರವಾದುದ್ದು. ತಮ್ಮಲ್ಲಿರುವ ಕಡಿಮೆ ಬಂಡವಾಳದಿಂದ ವಿದೇಶಿ ಬಂಡವಾಳಿಗರೊಡನೆ ಸೆಣಸಾಡಲು ಹೇಗೆ ಸಾಧ್ಯ ? ಸೀಮಿತ ಬಂಡವಾಳ ಆರ್ಥಿಕ ಬಿಕ್ಕಟ್ಟು ಇದರಿಂದ ಕುಸಿದ ಜೀವನಮಟ್ಟ ಇತ್ಯಾದಿಗಳಿಂದ ಸಮುದಾಯ ಅದೋಗತಿಯ ಅಂಚಿನಲ್ಲಿದೆ.

ಒಂದು ಕಡೆ ನೈಪುಣ್ಯವನ್ನು ತೋರುವ ಕುಲಕಸುಬುಗಳು ವಿದೇಶಿ ಬಂಡವಾಳಿಗರ ಸೊತ್ತಾಗಿವೆ. ಇನ್ನೊಂದು ಕಡೆ ಅಭಿವೃದ್ಧಿ ಪಥದಲ್ಲಿ ಸಾಗಿಸಬೇಕಿದ್ದ ಸರ್ಕಾರ ಇವರನ್ನು ಸ್ವತಂತ್ರ್ಯ ಬಂದು 56 ವರ್ಷಗಳಾದರೂ ಗಣನಿಗೆ ತೆಗೆದುಕೊಳ್ಳದೇ ಹೋಗಿದೆ.

ಈ ವೈಶ್ಯ ಸಮುದಾಯದ ಬಗ್ಗೆ ಅನೇಕ ಕಥೆಗಳನ್ನು ಪೂರ್ವಿಕರು ಹೇಳುತ್ತಾರೆ. ಇವರ ಕುಲಕಥನೆಗಳಲ್ಲಿ ಪಾಂಡ್ಯ-ಚೇಳರ ಸಂಘರ್ಷದ ಕತೆಗಳಿವೆ. ಕೆಲವರು ವೀರಶೈವ ಧರ್ಮದ ಪ್ರಭಾವಕ್ಕೆ ಒಳಗಾಗಿ ಲಿಂಗಧಾರಣೆ ಮಾಡಿಕೊಳ್ಳುತ್ತಾರೆ. ತಮ್ಮ ಮಕ್ಕಳಿಗೆ ಬಸವಣ್ಣ, ಸಿದ್ದರಾಮ, ರೇವಣ್ಣ, ರುದ್ರಯ್ಯ ಮುಂತಾದ ಹೆಸರುಗಳನ್ನು ಇಡುತ್ತಾರೆ. ತಲೆಮಾರಿನ ಲೆಕ್ಕದಲ್ಲಿ ಸುಮಾರು 300–400 ವರ್ಷಗಳಿಂದ ನಾವು ಕರ್ನಾಟಕದಲ್ಲೇ ಇದ್ದೇವೆ ಎಂದು ಹೇಳುತ್ತಾರೆ.

ತಮಿಳುನಾಡಿನ ತಮ್ಮ ಪೂರ್ವಿಕರ ಸಂಬಂಧವನ್ನು ಸಂಪೂರ್ಣ ಮರೆತುಬಿಟ್ಟಿದ್ದರೂ ಈ ಶತಮಾನದ ಕೊನೆಯಲ್ಲಿ ತಮ್ಮ ಮೂಲದ ಅನನ್ಯತೆಯ ಹುಡುಕಾಟ ಪ್ರಾರಂಭವಾದಾಗ ಕರ್ನಾಟಕದಲ್ಲಿರುವ ಇತರ ಪಂಗಡಗಳನ್ನು ಗುರುತು ಹಚ್ಚಿ ತಮಿಳುನಾಡಿನ ಸಂಬಂಧವನ್ನು ವಾರ್ಜಿತಪಡಿಸಿಕೊಳ್ಳಲು ಇತ್ತೀಚೆಗೆ ಕೊಡುವ-ತರುವ ಸಂಬಂಧವನ್ನು ಬೆಳಸಿದ್ದಾರೆ. ಕುಲಕಥನೆಗಳು ವೀರಶೈವ ಧರ್ಮದ ಪ್ರಭಾವ ತಲೆಮಾರಿನ ಲೆಕ್ಕ ಹಾಗೂ ಪೂರ್ವ ಪಂಗಡದ ವಿಸ್ಮೃತಿ ಇವುಗಳಲ್ಲದರ ಹಿನ್ನಲೆಯಲ್ಲಿ ಈ ಪಂಗಡದ ವಲಸೆ ಸುಮಾರು 15–16 ನೇ ಶತಮಾನದಲ್ಲಿ ಪಡೆದಿರಬಹುದೆಂದು ಊಹಿಸಬಹುದು.

ಆಂಧ್ರಮೂಲ-ತಮಿಳುಹಾದಿ ಕರ್ನಾಟಕದಲ್ಲಿ ನಲೆಯಾಗಿರುವ ಈ ಸಮುದಾಯಗಳು ಮೂರು ವಿಭಿನ್ನ ಭಾಕ್ಷಿಕ ನಲೆಗಳಲ್ಲಿ ತನ್ನ ಸಂಸ್ಕೃತಿಯನ್ನು ಕಟ್ಟಿಕೊಂಡಿದೆ. ಇವರ ಮೂಲ ಕಸುಬು ವ್ಯಾಪಾರ. ಈ ಉದ್ದೇಶವೆ ತಮಿಳುನಾಡಿನಿಂದ ಕರ್ನಾಟಕಕ್ಕೆ ವಲಸೆ ಆಗಲು ಕಾರಣವಾಗಿರಬಹುದು. ಈಗಲೂ ಮನೆಯ ಜವಾಬ್ದಾರಿಯನ್ನು ಹೊತ್ತಿರುವ ಗಂಡಸರು ವ್ಯಾಪಾರಕ್ಕಾಗಿ ಅಲೆದಾಡುತ್ತಲೇ ಇರುತ್ತಾರೆ. ಇವರ ಮನೆಮಾತು ತೆಲಗು ಎಂದು ಹೇಳಿಕೊಳ್ಳುತ್ತಾರೆ. ತೆಲುಗು ಮಾತನಾಡುವ ಅನೇಕ ವ್ಯಾಪಾರಿ ಸಮುದಾಯಗಳು ಕರ್ನಾಟಕದಲ್ಲಿವೆ.

## 2.1 ವೈಶ್ಯ ಜನಾಂಗದ ಭೌಗೋಳಿಕ ಪರಿಸರ :

ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿಯು ವೈಶ್ಯರು ವಾಸಿಸುತ್ತಾರೆ. ಸುಮಾರು ಒಂದು ಲಕ್ಷಕ್ಕೂ ಹೆಚ್ಚು ಇದ್ದಾರೆ. ಸಂಡೂರು ತಾಲೂಕಿನಲ್ಲಿ ಅಂದಾಜು ಹದಿನೈದು ಸಾವಿರ ವೈಶ್ಯರು ವಾಸಿಸುತಿದ್ದಾರೆ. ಬಳ್ಳಾರಿ ಜಿಲ್ಲೆಯ ಕೆಲವು ಗಡಿ ಭಾಗದ ವೈಶ್ಯರು ತೆಲುಗು ಮಾತನಾಡುತ್ತಾರೆ. ಹೆಚ್ಚಾಗಿ ವೈಶ್ಯರು ತೆಲುಗನ್ನೇ ಹೆಚ್ಚಾಗಿ ಮಾತನಾಡುವವರು. ಏಕೆಂದರೆ ಅವರ ಆರಾಧ್ಯ ದೇವತೆ ಶ್ರೀ ವಾಸವಿ ಕನ್ಯಕಾಪರಮೇಶ್ವರಿಯ ವಾಸಸ್ಥಾನ ಆಂದ್ರ ಪ್ರದೇಶದ ಪೆನಗೊಂಡ ಆಗಿರುವದರಿಂದ ತೆಲಗನ್ನೇ ತಮ್ಮ ಮಾತೃ ಬಾಷೆಯನ್ನಾಗಿ ಅಳವಡಿಸಿಕೊಂಡಿದ್ದಾರೆ. ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳನ್ನು ಮಾತನಾಡುವರು. ಇಲ್ಲಿ ಆಂದ್ರದ ವೈಶ್ಯರು ಇಲ್ಲಿಗೆ ಬಂದು ನೆಲಸಿದವರು ಇದ್ದಾರೆ. ಈ ಆಂಧ್ರದ ವೈಶ್ಯರಿಗೂ ಇಲ್ಲಿನ ವೈಶ್ಯರಿಗೂ ವೈವಾಹಿಕ ಸಂಬಂಧವಿದೆ. ಸಂಡೂರು ತಾಲೂಕಿನ ವೈಶ್ಯರಿಗೂ ಇಲ್ಲಿನ ವೈಶ್ಯರಿಗೂ ವೈವಾಹಿಕ ಸಂಬಂಧವಿದೆ. ಸಂಡೂರು ತಾಲೂಕಿನ ವೈಶ್ಯರ ಮಾತೃ ಬಾಷೆ ಕನ್ನಡವಾಗಿದೆ. ಸಂಡೂರಿನ ಬಹು ಸಂಖ್ಯಾತ ಜನಾಂಗಗಳಾದ ಬ್ರಾಹ್ಮಣರು ಲಿಂಗಾಯಿತರು, ಬೇಡನಾಯಕರು ಪ್ರಭಾವ ಇವರ ಮೇಲಾಗಿದೆ, ಇವರೆಲ್ಲರೂ ಕನ್ನಡವನ್ನೇ ಮಾತೃ ಬಾಷೆಯನ್ನಾಗಿ ಬಳಸುತ್ತಾರೆ.

## 2.2 ವೈಶ್ಯರ ಪೌರಾಣಿಕ ಹಿನ್ನಲೆ ಮತ್ತು ಅರಾಧ್ಯ ದೇವತೆ ವಾಸವಿಯ ಚರಿತ್ರೆ :

ಭೂಮಿಯಲ್ಲಿ ಅಜ್ಞಾನ ಅಂಧಕಾರ ಹೆಚ್ಚಿದಾಗ ದೇವರು ಜನರ ಉದ್ದಾರಕ್ಕಾಗಿ ಒಂದೊಂದು ಅವತಾರವನ್ನು ಎತ್ತುತ್ತಾನೆ. ಹರಿಯು ಹೇಗೆ ಹತ್ತು ಅವತಾರವನ್ನು ಎತ್ತಿ ಜನತೆಯನ್ನು ಉದ್ದರಿಸಿ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದ್ದಾನೆ. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಹೇಳಿದಂತೆ ಧರ್ಮ ಸಂಸ್ಥಾಪನಾರ್ಥಯ ಸಂಭವಾಮಿ ಯುಗೇ ಯುಗೇ ಅಂದರೆ ಸತ್ಯ ಧರ್ಮಗಳ ಪುನರುತ್ಥಾನಕ್ಕಾಗಿ ನಾನು ಯುಗ ಯುಗದಲ್ಲೂ ಅವತರಿಸುತ್ತೇನೆ. ಇದೇ ರೀತಿ ದ್ವಾಪರ ಯುಗದಲ್ಲಿ ದೌಪದಿಯಾಗಿ ತ್ರೇತ್ರಾಯುಗದಲ್ಲಿ ಜಾನಕಿಯಾಗಿ ಕಲಿಯುಗದಲ್ಲಿ ಕನ್ಯಕಾಪರಮೇಶ್ವರಿಯಾಗಿ ಜನಿಸಿ. ಮೂಢರನ್ನು ಸನ್ಮಾರ್ಗಿಯನ್ನಾಗಿ ಮಾಡಿ ಉದ್ದರಿಸಿದ ಮಾತೆ, ಮೋಹಾಂದಕಾರವು ಜಗತ್ತಿನಲ್ಲಿ ತೃಣ ಸಮಾನವೆಂದು ಮುಕ್ತಿಯೇ ಜೀವನದ ಮುಖ್ಯಗುರಿ ಎಂದು ತೋರಿಸಿದ ಮಾತೆ, ಆರ್ಯ ವೈಶ್ಯ ಕುಲದವರಾದ ಮಹತ್ಮಗಾಂಧೀಜಿಯವರು ಸ್ವತಂತ್ರಕ್ಕಾಗಿ ಅಹಿಂಸೆಯ ದಾರಿಯಲ್ಲಿ ನಡೆದರು. ಅಖಿಲಾಂಡಕೋಟಿ ಬ್ರಹ್ಮಾಂಡ ಜನನಿಯಾದ

ಶ್ರೀ ಕನ್ನಿಕಾಪರಮೇಶ್ವರಿಯಂತೆ ಸತ್ಯ, ಧರ್ಮ, ಅಹಿಂಸೆಯೇ ಗಾಂಧೀಜಿಯವರ ಉಸಿರಾಗಿತ್ತು. ಬಹುಶಃ ವಾಸವಿಯೇ ಗಾಂಧೀಜಿಯವರ ಆದರ್ಶವಾಗಿರಬಹುದು.

ಬ್ರಹ್ಮನ ಆದೇಶದಂತೆ ವಿಶ್ವಕರ್ಮನು ಸಕಲೈಶ್ವರ್ಯದಿಂದ ಕೂಡಿದ 18 ನಗರವನ್ನು ನಿರ್ಮಿಸಿದನು. ಗೋದಾವರಿಯ ದಂಡೆಯಲ್ಲಿರುವ ಪೆನಗೊಂಡೆಯು ಅದರಲ್ಲಿ ಒಂದಾಯಿತು. 714 ಗೋತ್ರ ವೈಶ್ಯರು ತಮ್ಮ ಕುಲ ಕಸುಬುಗಳಾದ ವ್ಯಾಪಾರ ಪಶುಪಾಲನೆಗಳನ್ನು ಮಾಡಿಕೊಂಡು ನೆಮ್ಮದಿಯಿಂದ ಜೀವನ ನೆಡೆಸುತ್ತಿದ್ದರು.

ಕುಸುಮವನ್ನು ಸದಾ ದೇವರ ಪೂಜೆಗೆ ತಂದು ದೇವಸ್ಥಾನಕ್ಕೆ ಕೊಡುತ್ತಿದ್ದ ದಂಪತಿಗಳಿಗೆ ಜನರ ಮೆಚ್ಚುಗೆಯ ಹೆಸರು ಕುಸುಮಾಂಬೆ ಮತ್ತು ಕುಸುಮ ಶ್ರೇಷ್ಠಿ, ಮಕ್ಕಳಿಲ್ಲವೆಂಬ ಚಿಂತೆಯಿಂದ ದೇವರನ್ನು ಪೂಜಿಸುತ್ತಿದ್ದರು. ಇವರ ಬೇಡಿಕೆ ದೇವರಿಗೆ ಕೇಳಿತೇನೋ ಎಂಬಂತೆ ಭಾಸ್ಕರಾಚಾರ್ಯರು ಪುತ್ರಕಾಮೇಷ್ಠಿಯಾಗ ಮಾಡಲು ತಿಳಿಸಿದರು. ತಮ್ಮ ಕುಲ ಗುರುಗಳಾದ ಭಾಸ್ಕರಾಚಾರ್ಯರ ಆದೇಶದಂತೆ ಯಾಗವನ್ನು ವಿಜೃಂಭಣೆಯಿಂದ ಮಾಡಿದರು. ಅಗ್ನಿ ದೇವನು ಸಂತೃಪ್ತನಾಗಿ ದಂಪತಿಗಳಿಗೆ ಪಾಯಸವನ್ನು ಅನುಗ್ರಹಸಿದನು. ಯಜ್ಞೇಶ್ವರನ ಅನುಗ್ರಹ ಪ್ರಸಾದದಿಂದ ಕುಸುಮಾಂಬೆಯು ಗರ್ಭಮತಿಯಾಗಿ ನವ ಮಾಸಗಳನ್ನು ಕಳೆದು ವೈಶಾಖ ಶುಕ್ಲ ದಶಮಿ ಶುಕ್ರವಾರ ಸಾಯಂಕಾಲ ಉತ್ತರಾ ನಕ್ಷತ್ರ ಕನ್ಯಾರಾಶಿಯಲ್ಲಿ ಅವಳಿ ಜವಳಿ ಮಕ್ಕಳು ಜನಿಸಿದರು. ಇವರಿಗೆ ಹಿರಿಯರ ಅನುಮತಿಯಂತೆ ದೈವ ಕೃಪೆಯಿಂದ ವಾಸವಿ ವಿರೂಪಾಕ್ಷನೆಂದು ನಾಮಕರಣ ಮಾಡಿದರು ಮಕ್ಕಳಿಬ್ಬರು ಚಂದ್ರನೋಪಾದನೆಯಲ್ಲಿ ದಿನೇ ದಿನೇ ಬೆಳೆದು ಸದ್ಗುಣಿಗಳಾದರು, ವಯೋ ಧರ್ಮಕ್ಕನುಸಾರವಾಗಿ ವಿಧ್ಯಾಬುದ್ಧಿಗಳನ್ನು ಕಲಿತು ರಾಜ್ಯದ ಕಣ್ಮಣಿಗಳಾದರು, ಭಾಸ್ಕರಾಚಾರ್ಯರ ಪ್ರಿಯ ಶಿಷ್ಯರಾದರು.

ಮಹಾರಾಜನಾದ ವಿಷ್ಣುವರ್ಧನನೊಮ್ಮೆ ರಾಜ್ಯವನ್ನು ವಿಸ್ತರಿಸಲೋಸಗ ದೊಡ್ಡ ಸೈನ್ಯದೊಡನೆ ದಶದಿಕ್ಕಿನಲ್ಲೂ ಸಂಚರಿಸಿದನು. ತನ್ನ ರಾಜಧಾನಿಗೆ ಹಿಂದಿರುಗುವಾಗ ಮಾರ್ಗ ಮಧ್ಯೆಯಲ್ಲಿ ಪೆನಗೊಂಡ ಸಿಕ್ಕಿತ್ತು. ತಮ್ಮ ಮಹಾರಾಜ ಬಂದಿರುವನೆಂಬ ಸಂಭ್ರಮದಿಂದ ಸಾಮಂತ ರಾಜನಾದ ಕುಸುಮ ಶ್ರೇಷ್ಠಿ ಊರನ್ನೆಲ್ಲಾ ಶೃಂಗರಿಸಿ ರಾಜ ಮರ್ಯಾದೆಯಿಂದ ತಮ್ಮ ಪ್ರಭುವನ್ನು ಬರಮಾಡಿಕೊಂಡನು. ಪೆನಗೊಂಡೆಯಲ್ಲಿ ಆ ದಿನದ ಸಂಭ್ರಮ ವಿಜೃಂಭಣೆ ಹೇಳತೀರದು, ಎಲ್ಲರೂ ಸಕಲಾಭರಣಭೂಷಿತರಾಗಿ ಹರ್ಷ ಚಿತ್ತದಿಂದ ನಲಿದಾಡುತಿದ್ದರು.

ರಾಜಪರಿವಾರದೊಡನೆ ಕುಸುಮ ಶ್ರೇಷ್ಠಿ, ರಾಜನನ್ನು ಎದುರುಗೊಂಡು ಸ್ವಾಗತಿಸಿದನು ರಾಜಮರ್ಯಾದೆಯೊಡನೆ ವಿಷ್ಣುವರ್ಧನನ ಮೆರವಣಿಗೆಯು ಊರಲ್ಲೆಲ್ಲಾ ನಡೆದು ಕುಸುಮ ಶ್ರೇಷ್ಠಿಯ ಅರಮನೆ ಮುಂದೆ ಬಂದಿತು. ಆಗ ಯವತಿಯರ ಮಧ್ಯೆ ಇರುವ ಭುವನೈಕ ಸುಂದರಿಯನ್ನು ಕಂಡನು ಅವಳನ್ನು ಕಂಡ ತಕ್ಷಣವೇ ವಿಷ್ಣುವರ್ಧನನ ಚಿತ್ರ ವಿಕಲ್ಪವಾಯಿತು. ಅವಳಲ್ಲಿ ಅವನ ದೃಷ್ಟಿ ಮನಸ್ಸು ಐಕ್ಯವಾದವು, ಚಂಚಲ ಚಿತ್ತದಿಂದ ಬಿಡಾರ ಸೇರಿದನು. ಎಷ್ಟೇ ಸಮಯ ಕಳೆದರೂ ಏನೇ ನೋಡಿದರೂ ಆ ರೂಪಸಿಯ ರೂಪ ಕಣ್ಣು ಮುಂದೆ ಬಂದು ಅವನ ಸಂಮಯವನ್ನು ಹಾಳು ಮಾಡಿತು. ವಿಧಿ ಲಿಖಿತದಂತೆ ಆಡುವ ಮನುಜರು ಏನು ಮಾಡಬಲ್ಲರೂ ಬ್ರಹ್ಮ ಲಿಖಿತವನ್ನು ತಪ್ಪಿಸಲು ಸಾಧ್ಯವಿಲ್ಲ.

ಜಗತ್ತಿನಲ್ಲೆಲ್ಲೂ ಕಾಣದ ಇಂತಹ ರೂಪವತಿ ನಮ್ಮ ಸಾಮಂತನ ಮಗಳೇ ಎಂಬುದು ತಿಳಿದು ಚಿಂತಾಕ್ರಾಂತನಾಗಿ ನೆಮ್ಮದಿಯನ್ನು ಕಳೆದುಕೊಂಡು ನಿದ್ರಾಹಾರವಿಲ್ಲದಂತೆ ಅವಳ ರೂಪಾಭಿಲಾಶಿಯಾಗಿ ಮೋಹಾಂಧಕಾರದಲ್ಲಿ ಮುಳುಗಿದನು ವಾಸವಿ ಇಲ್ಲದೆ ತಾನಿಲ್ಲವೆಂದು, ವಾಸವಿಯನ್ನಳಿದು ಬದುಕಿರಲಾರನೆಂದು ವಾಸವಿ ನನಗೆ ಬೇಕೆ ಬೇಕೆ, ಅವಳು ತನ್ನವಳಾಗಲೇಬೇಕು ಎಂದು ಸಾಮಧಾನ, ಬೇಧ, ದಂಡ ಯಾವುದರಿಮದಾದರೂ ಸರಿಯೇ ವಾಸವಿಯನ್ನು ತಾನು ಮದುವೆ ಆಗಲೆಬೇಕು ಎಂದು ಮಂತ್ರಿಗಳಿಗೆ ತಿಳಿಸಿದನು. ವಿಷಯವನ್ನು ತಿಳಿದ ಶ್ರೇಷ್ಠಿ ದಿಗ್ ಬ್ರಾಂತನಾದನು. ಇದು ನಡೆಯಲು ಸಾಧ್ಯವೇ ? ಅಂತರ್ ಜಾತಿ ವಿವಾಹ ಆಗಲಾರದು ಮಾತು. ಕ್ಷತ್ರಿಯರಾದ ಗೃಹಸ್ಥ ವಿಷ್ಣು ವರ್ಧನನಿಗೆ ವೈಶ್ಯ ಕನ್ಯೆಯನ್ನು ಕೊಟ್ಟು ವಿವಾಹ ಮಾಡುವುದೇ ಎಂತಹ ಮಹಾಪರಾಧ, ಆದರೆ ರಾಜಾಜ್ಞೆಯನ್ನು ಮೀರುವಂತಿಲ್ಲ. ಇಂತಹ ಇಕ್ಕಟ್ಟಿನ ಪರಿಸ್ಥಿತಿಯನ್ನು ಎದುರಿಸಲು ತಾನೊಬ್ಬನೇ ಅಸಮರ್ಥನೆಂದು ಭಾಸ್ಕರಾಚಾರ್ಯರ ಸಲಹೆಯನ್ನು ಕೇಳಿದನು. ಈ ಸಮಸ್ಯೆಯನ್ನು ಬಗೆಹರಿಸಲು 714 ಗೋತ್ರದ ಎಲ್ಲಾ ವೈಶ್ಯರನ್ನು 18 ನಗರಗಳಿಂದಲೂ ಬರಮಾಡಿಕೊಂಡು ಮಂತ್ರಾಲೋಚನೆ ನೆಡಸಿದನು. ವೈಶ್ಯಕುಲಕ್ಕೆ ಧಕ್ಕೆ ಬರಬಾರದೆಂದು ಮಹಾಸಭೆಯಲ್ಲಿ ಚರ್ಚೆ ನಡೆಸಿದರು ಎಲ್ಲರೂ ಒಂದೊಂದು ರೀತಿ ಅಭಿಪ್ರಾಯವನ್ನು ತಿಳಿಸಿದರು. ಕೊನೆಗೆ ಮಹಾಸಭೆಯಲ್ಲಿ 612 ಗೋತ್ರದವರು ರಾಜನೊಡನೆ ಸಂಬಂಧ ಬೆಳೆಸುವುದು ಒಳ್ಳೆಯದೆಂದರು. ಸಭಾಧ್ಯಕ್ಷರು ಇದನ್ನು ಒಪ್ಪಲಿಲ್ಲ. ಆದ್ದರಿಂದ 612 ಗೋತ್ರದವರು ಸಭೆಯನ್ನು ತಿರಸ್ಕರಿಸಿ ಹೋದರು. 102 ಗೋತ್ರದವರು ತಮ್ಮ ಜಾತಿ ಪರಿಶುದ್ದವಾದದ್ದು. ಅವರೊಡನೆ ಸಂಬಂಧ ಬೇಡವೆಂದರು. ಕೊನೆಗೆ ವಾಸವಿಯ ಅಭಿಪ್ರಾಯ ಕೇಳಿದರು. ಅದಕ್ಕೆ ವಾಸವಿ ನನಗೆ ಹಿಂಸೆ ರಕ್ತಪಾತವೆಲ್ಲಾ ಇಷ್ಟವಿಲ್ಲ. ಅನ್ಯಾಯದಿಂದ

ಆಗಬಹುದಾದ ಅನರ್ಥ ಮತ್ತು ಜೀವಹಾನಿಯನ್ನು ತಪ್ಪಿಸಲು ಅಗ್ನಿಗೆ ಆತ್ಮರ್ಪಣೆಯನ್ನು ಮಾಡುವೆ ಎಂದಳು. 102 ಗೋತ್ರದವರೆಲ್ಲಾ ಅವಳ ಅಭಿಪ್ರಾಯವನ್ನು ಒಪ್ಪಿದರು. ಬಲತ್ಕಾರದಿಂದಲಾದರೂ ಕರೆದುಕೊಂಡು ಹೋಗಲು ಸೈನ್ಯದೊಡನೆ ಬಂದಿದ್ದ ಮಂತ್ರಿಗೆ ಒಪ್ಪಿಗೆಯನ್ನು ಸೂಚಿಸಿ ಮದುವೆಗೆ ಸಿದ್ಧತೆ ನೆಡೆಸಲು ತಿಳಿಸಿದರು.

ಒಂದು ಪ್ರಧಾನ ಅಗ್ನಿಕುಂಡ ಮತ್ತು 102 ಅಗ್ನಿಕುಂಡವನ್ನು ತಯಾರುಮಾಡಿದರು. 102 ಗೋತ್ರದ ಹಿರಿಯ ದಂಪತಿಗಳು ಮಡಿಯುಟ್ಟು ಬಂದು ದೇವಿಯ ಪ್ರೇರಣೆಯಂತೆ ಅವಳನ್ನು ಅನುಸರಿಸಿ ಅಗ್ನಿಕುಂಡಕ್ಕೆ ಧುಮುಕಿದರು ವಾಸವಿಯೊಡನೆ ಅಗ್ನಿ ಪ್ರವೇಶ ಮಾಡಿದ 102 ಗೋತ್ರದ ದಂಪತಿಗಳಿಗೆ ಮುಕ್ತಿ ದೊರೆಯಿತು.

ಸಂತೋಷಾತಿರೇಕದಿಂದ ಸೈನ್ಯದೊಡನೆ ವಿಷ್ಣುವರ್ಧನನು ಪೆನಗೊಂಡೆಯನ್ನು ಪ್ರವೇಶಿಸಿದನು. ಆಗ ಎಲ್ಲರೂ ಅಗ್ನಿ ಪ್ರವೇಶ ಮಾಡಿದ ವಿಷಯ ತಿಳಿಯಿತು. ಇನ್ನೂ ಅಗ್ನಿಕುಂಡಗಳು ಉರಿಯುತ್ತಲೇ ಇದ್ದವು. ಇದನ್ನು ಕಂಡು ವಿಷ್ಣುವರ್ಧನನಿಗೆ ಮತಿಭ್ರಮಣೆಯಾಗಿ ಅಂಭಾರಿಯ ಮೇಲಿಂದ ಬಿದ್ದು ತಲೆಯೊಡೆದು ಪ್ರಾಣಬಿಟ್ಟನು. ಪುರಜನರೆಲ್ಲ ವೈಶ್ಯರ ಬಲಿದಾನವನ್ನು ಕೊಂಡಾಡಿದರು. ಶಕ್ತಿಯಿಂದಾಗದಿದ್ದನ್ನು ಯುಕ್ತಿಯಿಂದ ಜಯಿಸಿ ತಮ್ಮ ಕುಲಕ್ಕೆ ಶೋಭೆಯನ್ನು ತಂದುಕೊಂಡು ತಾವು ಸ್ವರ್ಗ ಸೇರಿದ ವೈಶ್ಯರೇ ಧನ್ಯರು ಲೋಕಮಾನ್ಯರೆಂದು ಕೊಂಡಾಡಿದರು.

ಇದು ವೈಶ್ಯರ ಅರಾಧ್ಯ ದೇವತೆ ಶ್ರೀ ಕನ್ಯಾಕಾಪರಮೇಶ್ವರಿಯ ಪೌರಾಣಿಕ ಹಿನ್ನಲೆ ಅಂದಿನಿಂದ ವೈಶ್ಯರು ಶ್ರೀ ವಾಸವಿಯನ್ನು ಕುಲದೇವತೆಯಾಗಿ ಪೂಜಿಸುತ್ತಾರೆ.

**ಶ್ರೀ ಕನ್ನಿಕಾಪರಮೇಶ್ವರಿ**

ಶ್ರೀ – ಮಾತೆ ಇವಳು

ಕ – ಕಷ್ಟವನ್ನು ಕಳೆಯುವವಳು

ನ್ನಿ – ನಿಗಮಾಗಮ ಗೋಚರಳು

ಕಾ – ಕಾರುಣ್ಯನಿಧಿ ಇವಳು

ಪ – ಪರಶಿವನ ಆರಾಧಕಳು

ರ – ರತಿಗಿಂತ ಸುಂದರಳು

ಮೇ – ಮೇದಿನಿಯೊಳು ಉತ್ತಮಳು ಐ

ಶ್ವ – ಶ್ವರಿಗಳನ್ನು ತರುವಂತಹ ನಾ

ರಿ – ರಿಯಾದ ಶ್ರೀ ಮಾತೆಗೆ ನಮನ ಕನ್ನಿಕೆಯಾದ ವಾಸವಿ ಪರಮೇಶ್ವರನನ್ನು ಸೇರಿ ಕನ್ನಿಕಾಪರಮೇಶ್ವರಿಯಾದಳು.

**ವಾಸವಿ**

ವಾ – ವಾಂಛಿತಾರ್ಥ ಫಲದಾಯಕಿ

ಸ – ಸರ್ವ ಫಲದಾಯಕಿ

ವಿ – ವಿಶ್ವ ವ್ಯಾಪಕಿ.

ವೈಶ್ಯದ ಪೌರಾಣಿಕ ಹಿನ್ನಲೆಯಲ್ಲಿ ಇನ್ನು ಅನೇಕ ಕದನಗಳನ್ನು ಕಾಣಬಹುದು. ಕುಲಕಥನಗಳನ್ನು ಜನಾಂಗದ ಮೂಲವನ್ನು ತಿಳಿಯುವುದಕ್ಕೆ ನೇರ ಅಕರವಾಗಿ ಬಳಸಲು ಅನೇಕ ತೊಡಕುಗಳಿವೆ. ಇಲ್ಲಿ ತನ್ನ ಕುಲವನ್ನು ಪವಿತ್ರೀಕರಿಸುವ ಪ್ರಕ್ರಿಯೆ, ರಾಜನೊಡನೆ ಸಂಘರ್ಷ ಹಾಗೂ ಪ್ರಧಾನ ಸಂಸ್ಕೃತಿಯೊಡನೆ ತನ್ನ ಅನನ್ಯತೆಯನ್ನು ಗುರುತಿಸುವುದು ಮತ್ತು ಪುರಾಣ ಮೂಲಕ್ಕೆ ಹೋಗುವುದು ಕಲಕಥನಗಳ ಲಕ್ಷಣವಾಗಿದೆ. ಏಕೆಂದರೆ ಬೇರೊಂದು ಕುಲದ ಕಥನದಲ್ಲೂ ಈ ಲಕ್ಷಣಗಳು ಕಾಣಿಸಿಕೊಳ್ಳುತ್ತೇವೆ. ಆದ್ದರಿಂದ ಕುಲಕಥನಗಳ ರಚನೆ ಮಾದರಿ ಹೀಗಿರುವುದಕ್ಕೆ ಅದರ ಹಿಂದಿನ ಸಾಂಸ್ಕೃತಿಕ ಒತ್ತಡ ಯಾವುದೆಂದು ಗುರುತಿಸುವುದಷ್ಟಕ್ಕೆ ಸಹಾಯವಾಗಬಹುದು.

ದೃಷ್ಟಿಕರ್ತನಾದ ಬ್ರಹ್ಮದೇವನ ಮಹಾಸಭೆಯಲ್ಲಿ ಭೂ ಲೋಕದಲ್ಲಿ ಅಂಧಕಾಸುರನೆಂಬ ರಾಕ್ಷಸನನ್ನು ಪರಿಹರಿಸುವ ಪ್ರಸ್ತಾಪವಾಗುತ್ತದೆ. ಬ್ರಹ್ಮದೇವನ ಸಮ್ಮುಖದಲ್ಲಿ 'ಗುಂಡಾಗ್ನಿ' ಎಂಬ ಯಜ್ಞ ನಡೆಯುತ್ತದೆ. ಈ ಯಜ್ಞದಿಂದ ಪೃಥ್ವೀಶ್ವರನು ಹುಟ್ಟಿ ಅಂಧಕಾಸುರನನ್ನು ಸಂಹರಿಸುತ್ತಾನೆ ನಂತರ ಪೃಥ್ವೀಶರನಿಗೆ 'ಸುಪ್ರಭ'ಯೊಡನೆ ಲಗ್ನ ಮಾಡಲಾಗುತ್ತದೆ. ಇವರಿಗೆ ಸುನೇತ್ರ, ಸುದರ್ಶನ, ಸುಬಾಹು, ಮಣಿಗ್ರೀವ, ಲಕಂಠ, ಸುನಾಭ, ಬಲಿ ಎಂಬ ಸುಪ್ತ ಸಂತಾನವು ಉಂಟಾಗುತ್ತದೆ ಇವರಿಗೆಲ್ಲ ಮದುವೆಗಳಾಗಿ ಈ ಸಮುದಾಯದ ಮೂಲ ಪುರುಷರು ಹುಟ್ಟುತ್ತಾರೆ. ಇವರೆಲ್ಲಾ ಋಷಿ ಮೂಲಕ್ಕೆ ಹೋಲಿಸಿಕೊಳ್ಳುವ ಸಂಸ್ಕೃತೀಕರಣ ಪ್ರಕ್ರಿಯೆ ನಡೆಯುತ್ತದೆ.

ಚೋಳರಾಜನ ಕಾಂಚಿನಗರ ವಾಸಿಯಾಗಿ ರಾಜ್ಯಭಾರ ಮಾಡುತ್ತಿರಲು ದೂರದೇಶದಲ್ಲಿರುವ ಸೈನಿಕರಿಗೆ ಆಹಾರ ಪದಾರ್ಥಗಳನ್ನು ಸಾಗಿಸುವ ರೀತಿ ಗೊತ್ತಾಗದೆ ಚಿಂತಾಕ್ರಾಂತವಾಗಿರಲು, ಮಂತ್ರಿ ಮುಮ್ಮಡಿ ಬಿಲ್ಲುಶೆಟ್ಟರು ಇದಕ್ಕೆ ಪರಿಹಾರ ಸೂಚಿಸಬಲ್ಲರೆಂದು ಹೇಳುತ್ತಾನೆ. ಆ ಪ್ರಕಾರವಾಣಿ 16 ಮಂದಿ ಬಿಲ್ಲುಶೆಟ್ಟರಿಗೆ ಚೋಳರಾಜ ತಾಂಬೂಲ ಸತ್ಕಾರಗಳನ್ನು ಮಾಡಿ ತನ್ನ ಕಷ್ಟವನ್ನು ತಿಳಿಸುತ್ತಾನೆ. ಈ ಸಮಸ್ಯೆಯನ್ನು ಪರಿಹರಿಸುತ್ತೇವೆ ಎಂದು ಒಪ್ಪಿಕೊಂಡು ಬಿಲ್ಲುಶೆಟ್ಟಿ ಇಷ್ಟ ದೇವತೆಯಾದ ಕಾಮಾಕ್ಷನನ್ನು ನೆನೆದು ಬ್ರಹ್ಮಯಜ್ಞಕುಂಡದಿಂದ ಹುಟ್ಟಿದ ಅದೃಷ್ಟ ಬೀಜಗಳಿಂದ ಮರಗಳನ್ನು ಬೆಳಸಿ ಮರಗಳಿಂದ ನಾರನ್ನು ತೆಗೆದು ಗೋಣಿಗಳನ್ನು ಮಾಡಿದರು ನಂತರ ಈ ಗೋಣಿ ಚೀಲಗಳಲ್ಲಿ ರಾಜನು ಕೊಟ್ಟ ಧಾನ್ಯಗಳನ್ನು ತುಂಬಿ ಸೈನಿಕರಿದ್ದ ಕಡೆಗೆ ತಲುಪಿಸಿ ಯಶಸ್ವಿಯಾದರು ಇದರಿಂದ ಸಂತೃಪ್ತನಾದ ರಾಜ ಅವರಿಗೆ ಕಡಗಗಳನ್ನು ತೊಡಿಸಿ ಸನ್ಮಾನಿಸಿದ. ನಂತರ ದೂರದೇಶದಿಂದ ಬಂದ 24 ಜನ ಕಳ್ಳರು ಈ ಮುಮ್ಮಡಿ ಬಿಲ್ಲಶೆಟ್ಟರಲ್ಲಿ ರಕ್ಷಿಸಬೇಕೆಂದು ಶರಣಾದರು ಆಗ ರಾಜ ಸಾಧು ಶೆಟ್ಟರನ್ನು ಕರೆಸಿ ಅವರನ್ನು ಬಿಟ್ಟು ಬಿಡಬೇಕೆಂದು ಆಜ್ಞೆ ವಿಧಿಸಿದ ಶರಣಾಗದವರನ್ನು ಕಾಯುವುದು ನಮ್ಮ ಧರ್ಮವೆಂದು ಸಾಧುಶೆಟ್ಟರು ನಿರಾಕರಿಸಿ ಅವರಿಗೆ ಬದಲಾಗಿ ತಮ್ಮ ಶಿರಗಳನ್ನು ಅರ್ಪಿಸಿಬಿಟ್ಟರು ಕೂಡಲೇ ದೇವತೆಗಳು ಪ್ರತ್ಯಕ್ಷವಾಗಿ ವೈಶ್ಯರಿಗೆ ಜೀವಗಳನ್ನು ಕೊಟ್ಟು ಇವರಿಗೆ ಋಷಿಗಳ ಗೋತ್ರಗಳನಿಟ್ಟು ಅದೃಶ್ಯರಾದರು ನಂತರ ಚೋಳರಾಜನಿಗೆ ಇವರ ಕುಲದಲ್ಲಿ ಒಬ್ಬ ಕನ್ಯೆಯನ್ನು ಮದುವೆಯಾಗಬೇಕೆಂಬ ಆಸೆಯಾಗಿ ಮಂತ್ರಿಯೊಡನೆ ಹೇಳಿಕಳುಹಿಸುತ್ತಾನೆ. ಕುಲ ಮುಖಂಡರು ಸಭೆ ಸೇರಿ. ನಾವು ಮಧ್ಯ ಮಾಂಸ ಸೇವಕರಲ್ಲಿ ಹಾಗೂ ಬೇರೆ ಜಾತಿಯೊಡನೆ ವೈವಾಹಿಕ ಸಂಬಂಧ ಇಟ್ಟು ಕೊಳ್ಳುವುದಿಲ್ಲ ಎಂದು ರಾಜನಿಗೆ ಹೆಣ್ಣು ಕೊಡುವುದಿಲ್ಲ ಎಂದು ಹೇಳಿ ಬಿಡುತ್ತಾರೆ ನಂತರ ರಾಜನು ಉಪಾಯದಿಂದ ಇವರ ಮನೆಯಲ್ಲಿ ದನದ ತಲೆ, ಮಧ್ಯವನ್ನು ಇರಿಸಿ ಇವರನ್ನು ಪರೀಕ್ಷಿಸಿ ಹಿಡಿದು ತನ್ನಿ ಎಂದು ಹೇಳಿ ಕಳುಹಿಸಿದಾಗ ಕಂಚಿ ಕಾಮಾಕ್ಷಮ್ಮನ ಕೃಪೆಯಿಂದ ಮಧ್ಯೆ ಹಾಲಾಗಿ, ದನದ ತಲೆ ಮರದ ತಲೆಯಾಗಿ ಮಾರ್ಪಟ್ಟಿರುತ್ತದೆ. ವೈಶ್ಯರೆಲ್ಲಾ ಸಭೆ ಸೇರಿ ಚೋಳರಾಜನನ್ನು ಉಪಾಯದಿಂದ ವಂಚಿಸಬೇಕೆಂದು ಕನ್ಯೆ ಕೊಡುವುದಾಗಿ ಕರೆಯುತ್ತಾರೆ. ಕನ್ಯೆಯ ಪ್ರತಿರೂಪವಾದ ಪ್ರತಿಮೆಯನ್ನು ಮಾಡಿ ಶಯನಗೃಹದಲ್ಲಿ ತಂದಿಡುತ್ತಾರೆ. ರಾಜ ಮೈ ಮರೆತು ಅವಳ ಕೈ ಎಳಿದಾಗ ವಿಗ್ರಹವೆಂದು ಗೊತ್ತಾಗುತ್ತದೆ.

"ನಿಮ್ಮ ಮನೆಯಲ್ಲಿ ಕನ್ಯೆಯ ಎತ್ತರದ ಬಂಗಾರವಿರುತ್ತದೆ. ಆದರೆ ಅಂದಗಾತಿಯರಾದ ಕನ್ಯೆಯರು ಇರುವುದಿಲ್ಲ" ಎಂದು ಶಾಪ ಕೊಡುತ್ತಾನೆ.

ಆರ್ಯವೈಶ್ಯ ಪುರಾಣಗಳಿಂದ ಪ್ರಭಾವಿತವಾಗಿರುವುದು. ಅದನ್ನೇ ಅನುಸರಿಸುವುದು. ಉದಾಹರಣೆಗೆ ಆರ್ಯವೈಶ್ಯ ಪುರಾಣದಲ್ಲಿ ಚೋಳರಾಜ ನಮ್ಮಲ್ಲಿ ಸುಂದರಿಯರು ಇಲ್ಲವಾಗಲಿ ಎಂದು ಶಾಪ ಕೊಡುವುದನ್ನು ನೇರವಾಗಿ ಬಳಸಿಕೊಳ್ಳಲಾಗಿದೆ. ಆರ್ಯವೈಶ್ಯ ಮತ್ತು ದೇಶಾಧಿಪತಿ ಪುರಾಣಗಳಲ್ಲಿ ಇಲ್ಲದ ಅಂಶಗಳು ಇವರಲ್ಲಿರುವ ಕುಲಗಳ ಸೇರ್ಪಡೆ ಕಥನದಲ್ಲಿ ಅದರ ಬೆಳವಣಿಗೆ ಧಕ್ಕಯಾಗದಾಗೆ ಔಚಿತ್ರಪೂರ್ಣವಾಗಿಯೇ ಮೊದಲ ಕಥನಗಳು ತಮ್ಮ ಬಳಿಗಳನ್ನು ಸೇರಿಸಿ ಕೊಂಡಿವೆ. ಕುಲಗಳಿಗೆ ಮಹರ್ಷಿಗಳ ಹೆಸರನ್ನು ಕೊಟ್ಟು ಸಂಸ್ಕೃತೀಕರಣಗೊಳಿಸಿ ಕೊಂಡಿವೆ. ಈ ಸಂಸ್ಕೃತೀಕರಣ ಪ್ರಕ್ರಿಯೆ ಕುರಿತು 1951 ರಲ್ಲಿ ರಚಿತವಾದ ಸಾಧು ಶೆಟ್ಟರು ಕೃತಿಯು ಗಮನಾರ್ಹವಾದ ಒಂದು ವಿಮರ್ಶೆಯನ್ನು ನೀಡುತ್ತದೆ. "ಗೋತ್ರನಾಮವು ಹೀಗೆ ಮಹರ್ಷಿನಾಮಗಳಾಗಿ ಬದಲಾವಣೆಯಾದುದಲ್ಲದೆ. ಅವರವರಿಗೆ ತೋಚಿದಂತೆ ಆರ್ಯರ ಪುರಾಣಗಳಿಂದ ಕತೆಗಳನ್ನು ಗ್ರಹಿಸಿ ಆಯಾಯ ಜಾತಿಗಳ ಹುಟ್ಟಿಗೆ ಸಂಬಂಧಿಸಿದಂತೆ ಬದಲಾವಣೆ ಮಾಡಿ ತಗಲಿಸಿಕೊಂಡರು.

ಸಮುದಾಯದವರೇ ಕುಲಗಳಿಗೆ ಮಹರ್ಷಿ ನಾಮಗಳು ಬಂದವೆಂದು ಒಪ್ಪಿಕೊಂಡಿರುವುದು ಗಮನಾರ್ಹ ಈ ಗೋತ್ರಗಳಲ್ಲಿ ವೃತ್ತಿನಾಮಗಳಷ್ಟೇ ಇಲ್ಲ. ಪ್ರಾಣಿನಾಮಗಳು ಇವೆ. ವಸ್ತುನಾಮಗಳು ಇವೆ. ಆದ್ದರಿಂದ ಋಷಿ ಮೂಲಗಳಿಗೆ ಕಥನಗಳನ್ನು ಕಟ್ಟುವುದು ಜನಾಂಗದ ಸಂಸ್ಕೃತೀಕರಣ ಪ್ರಕ್ರಿಯೆ ಎಂದು ಗುರುತಿಸಬಹುದು.

ಹೀಗೆ ಮೊದಲ ಭಾಗದ ಕತೆಗಳಲ್ಲಿ (ಬ್ರಹ್ಮ, ಯಜ್ಞ, ಪೃಥ್ವೀಶ್ವರ, ತಿರುಕೋಟಿ) ಮಹರ್ಷಿಗಳ ಕತೆಗಳೆಲ್ಲಾ ವೈದಿಕ ಸಂಸ್ಕೃತಿಯನ್ನು ಅನುಕರಿಸುವ ಕಥನಗಳಾಗಿವೆ. ಈಗಾಗಲೇ ಪ್ರತಿಷ್ಠಿತವೆನಿಸಿಕೊಂಡಿದ್ದ ಕುಲಗಳೊಡನೆ ತಮ್ಮ ಕಥನಗಳನ್ನು ಕಟ್ಟುವುದುಕ್ಕೆ ಕಾರಣ ಇವರು ತಮ್ಮ ಐಡೆಂಟಿಯನ್ನು ಕಾಯ್ದುಕೊಳ್ಳುವುದೇ ಆಗಿದೆ. ವಸ್ತುವಿನ ವಿನಿಮಯ ಮತ್ತು ಸಾಗಾಣಿಕೆಯ ಸಮಸ್ಯಯಾಗಿದೆ, ಪೂರ್ವದ ಅನೇಕ ಬುಡಕಟ್ಟು ಸಮುದಾಯಗಳು ಈ ಸಮಸ್ಯೆಯನ್ನು ಅಥವಾ ಗುಂಪು ಇದನ್ನು ಪರಿಹರಿಸಿರಬಹುದು. ಅದೇ ಅವರ ವೃತ್ತಿಯಾಗಿಯೂ ಜಾತಿಯಾಗಿಯೂ ಪರಿವರ್ತನೆಯಾಗಿರಬಹುದು ಬಹುಶ: ಈ ಸಮುದಾಯದ ಪೂರ್ವಕುಲಕಸುಬು ವ್ಯಾಪಾರ ಗೋಣಿಚೀಲ ಉತ್ಪಾದನೆ ಮಾಡುವುದೇ ಆಗಿದೆ. ಇದರಿಂದ ಸಾಗಾಣಿಕೆ ಸಮಸ್ಯೆ ಪರಿಹಾರವು ಆಗಿದೆ.

ಬಹು ಪುರಾತನವಾದ ಸಮುದಾಯಗಳು ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ಬದಲಾವಣೆಗಳ ರೂಪದಲ್ಲಿ ನಿಂತಿವೆ. ಸರಿ–ತಪ್ಪುಗಳ ಮೌಲಿಕ ವಿಶ್ಲೇಷಣೆ ಮಾಡುವುದು ತೀರಾ ಕಷ್ಟದ ಸಂಗತಿ. ಒಂದು ಕಾಲದಲ್ಲಿ ಮೌಲಿಕವಾದದ್ದು ಮತ್ತೊಂದು ಕಾಲಘಟ್ಟದಲ್ಲಿ ಅಪಮೌಲ್ಯವಾಗಬಹುದು. ಆದರೆ ಅದನ್ನು ಮೀರುವ ಮೌಲ್ಯದೊಡನೆ ಗುರುತಿಸಿಕೊಳ್ಳುವ 'ತೀವ್ರತೆ ಎಲ್ಲ ಸಮುದಾಯಗಳ ಲಕ್ಷಣಗಳು ಆಗಿವೆ. ತೀರಾ ಪ್ರಾಚೀನವಾದ ಪ್ರವೃತ್ತಿವಾಸನೆಗೆ ಕುಲಕಥನಗಳು ವಿಭಿನ್ನವಾದ ಸಮರ್ಥನೆಯನ್ನು ಕೊಡುವ ಯತ್ನ ಮಾಡುತ್ತವೆ ಅ ನಿಟ್ಟಿನಲ್ಲಿ ಈ ಭಾಗದ ಕಥನವನ್ನು ಗಮನಿಸುವ ಪ್ರಯತ್ನವಷ್ಟೆ ಹೊರತು ಇದು ತೀರ್ಮಾನವಲ್ಲ ಇದರಿಂದ ಕುಲಕಥನಕ್ಕೆ ಯಾವ ಕೀಳರಿಮೆಯಾ ಪ್ರಾಪ್ತವಾಗುವುದಿಲ್ಲ ಕಳ್ಳತನವನ್ನು ಕಸುವಬಾಗಿನಕೊಂಡ ಅನೇಕ ಸಮುದಾಯಗಳು ಭಾರತದಲ್ಲಿದೆ ಇದಕ್ಕೆ ಉದಾಹರಣೆ ಕರ್ನಾಟಕದ ಕೊರವರು ತಮಿಳುನಾಡಿನ 'ಕಳ್ಳರ್ ಕುಲ' ತಮಿಳುನಾಡಿನ ಅರವತ್ತಮೂರು ಪುರಾತನರಲ್ಲಿ ತಿರುಮಂಗೈಯಾಳ್ವರ್ ಕಳ್ಳರ್ ಕುಲಕ್ಕೆ ಸೇರಿದವರು. ಧಾರ್ಮಿಕವಾಗಿ ಈ ಸಮುದಾಯಕ್ಕೆ ತಮಿಳುನಾಡಿನ ನಯನಾರ್ ಅಳ್ವರ್‌ರ ಪ್ರಭಾವ ತುಂಬಾ ಇದೆ. ಕರ್ನಾಟಕದಲ್ಲಿ ಇವರ ಧಾರ್ಮಿಕ ಕೇಂದ್ರ ನಂಜನಗೂಡು. ಚೋಳರಾಜ ಮತ್ತು ವಿಷ್ಣುವರ್ಧನ ಮಹಾರಾಜ ಇವರ ಕುಲದಲ್ಲಿ ಹೆಣ್ಣು ಕೇಳುವುದು, ಅದನ್ನು ಇವರ ನಿರಾಕರಿಸುವುದು . ಕಂಚಿ ರಾಮಕ್ಷನ ಕೃಪೆಯಿಂದ ಇಬತ ಮನೆಯಲ್ಲಿಟ್ಟಿದ್ದ ದನದ ತಲೆ, ಹೆಂಡ, ಮರ–ಹಾಲು ಆಗುವುದು ಈ ಕಥನಗಳಲ್ಲಿ ಬರುತ್ತದೆ. ರಾಜನೇ ಹೆಣ್ಣು ಕೇಳಿದರೂ ಕೊಡುವುದಿಲ್ಲವೆಂದು ನಿರಾಕರಿಸುವುದು ತಮ್ಮ ಕುಲ ಪವಿತ್ರವಾದದ್ದು ಎಂದು ಹೇಳುವ ಆಶಯವಾಗಿದೆ ಈ ಸಮುದಾಯ ಬುಡಕಟ್ಟು ಲಕ್ಷಣಗಳಿಂದ ಕುಲಕಟ್ಟು ವ್ಯವಸ್ಥೆಗೆ ತಿರುಗಿಕೊಳ್ಳುತಿದ್ದಾಗ ಚಾರಿತ್ರಿಕವಾಗಿ ತಮಿಳುನಾಡಿನಲ್ಲಿ ಪಾಂಡ್ಯ ಚೇಳರ ಅಧಿಪತ್ಯವಿತ್ತು. ಆದ್ದರಿಂದ ಈ ಎರಡೂ ರಾಜಮನೆತನಗಳು ಸಂಘರ್ಷದೊಟ್ಟಿಗೆ ತಮ್ಮನ್ನು ಗುರುತಿಸಿಕೊಳ್ಳುವ ಪ್ರಯತ್ನವನ್ನು ಕುಲಕಥನಗಳು ಮಾಡುತ್ತವೆ. ಇವರ ಮೂಲ ಕೊಂಗನಾಡೇ ಆದ್ಧರಿಂದ ತಮ್ಮ ಪೂರ್ವ ಕಥನಗನ್ನು ಅಲ್ಲಿಂದ ಪ್ರಾರಂಭಿಸುತ್ತಾರೆ, ಅದರೆ ಕರ್ನಾಟಕದಲ್ಲಿ ತೆಲುಗು ಮಾತನಾಡುವ ಬಲಿಜಿಗರ ಕಥನ ವಿಜಯನಗರವನ್ನು ಕಥನದ ನಲೆಯಾಗಿಸಿಕೊಂಡಿದೆ.

ಈ ಸಮುದಾಯದ ಕಥನಗಳಲ್ಲಿ ಹೆಚ್ಚು ಚೋಳರಾಜನ್ನು ಕಾಂಚಿಪಟ್ಟಣ ಹಸರಿಸುವುದರಿಂದ ಇವರು ತಮಿಳು ಮೂಲದವರು ಎಚಿದು ಸ್ಪಷ್ಟವಾಗುತ್ತಾರೆ. ಹಾಗೆ ಇವರ ವಲಸೆಯ ದಾರಿಗಳು ಮತ್ತು ಈಗ ನಲೆಯಾಗಿರುವ ಕೆಲವು ಪ್ರದೇಶಗಳು ಕರ್ನಾಟಕ–ತಮಿಳುನಾಡಿನ ಗಡಿ ಪ್ರದೇಶಗಳೇ ಆಗಿವೆ.

□ **ಕುಲಕಥನ :**

ಭೂ ಲೋಕದಲ್ಲಿ ಅಂಧಕಾಸುರನೆಂಬ ರಾಕ್ಷಸನು ಮೂರು ಲೋಕಗಳಿಗೂ ಕಂಟಕ ಪ್ರಾಯವಾಗಿ ದೇವ ಮಾನವರಿಗೆ ಹಿಂಸಿಸುತ್ತಿದ್ದನು. ದೇವ ಮಾನವರು ಬ್ರಹ್ಮನನ್ನು ಮೊರೆ ಹೋದರು. ಬ್ರಹ್ಮನು 'ಗುಂಡಾಗ್ನಿ' ಎಂಬ ಯಜ್ಞವನ್ನು ಮೊದಲು ತಿಳಿಸಿದನು. ಆ ಯಜ್ಞ ಕುಂಡದಿಂದಾಜಾನುಬಾಹು ದೀರ್ಘಾಲೋಚನೆ ಬಲಿಷ್ಠ. ಸೂರ್ಯಪ್ರಕಾಶ ತೇಜ ದಿವ್ಯ ಪುರುಷನೊಬ್ಬ ಉದಯಿಸಿದನು. ಬ್ರಹ್ಮನು ಅವನನ್ನು ಆಲಂಗಿಸಿಕೊಂಡು 'ವೃಥ್ವೀಶ್ವರನೆಂಬ ನಾಮಕರಣ ಮಾಡಿ ಅಂಧಕಾಸುರನನ್ನು ಕೊಂಡು ಲೋಕವನ್ನು ರಕ್ಷಿಸಬೇಕೆಂದು ಆದೇಶಿಸಿದನು. ಅದಕ್ಕೆ ಅನುಗುಣವಾಗಿ ಪೃಥ್ವೀಶ್ವರನು ಯುದ್ಧ ಮಾಡಲು ಅಂಧಕಾಸುರನ ಮುಂದೆ ಅವನ ಅಸ್ತ್ರಗಳೆಲ್ಲಾ ವ್ಯರ್ಥವಾದವು. ಆಗ ಶಿವನನ್ನು ಪ್ರಾರ್ಥಿಸಿದನು. ಶಿವನು ಪೃಥ್ವೀಶ್ವರ ಶರೀರ ಹೊಕ್ಕು ಬಲವನ್ನು ಕೊಟ್ಟನು ತ್ರಿಶೂಲ ಅಂಧಕಾಸುರನಿಗೆ ನಾಟಿ ಅವನು ಸತ್ತನು, ನಂತರ ಪೃಥ್ವೀಶ್ವರನು ಹರಿಹರ ಬ್ರಹ್ಮಾಧಿಗಳನ್ನು ಪ್ರಾರ್ಥಿಸಿ ಅಂಧಕಾಸುರನ ಕಳೆಬರವನ್ನು ಕೊಯ್ದು ಆಯಾಯ ದೇವತೆಗಳಿಗೆ ಹಂಚಿದನು ರಾಕ್ಷಸನನ್ನು ಕೊಲ್ಲುವುದರಲ್ಲಿ ಹೆಚ್ಚಿನ ಸಹಾಯ ಒದಗಿಸಿದ ಮಹೇಶ್ವರನಿಗೆ ಹೆಚ್ಚಿನ ಭಾಗ ಬಂದುದರಿಂದ ಅವನ ಅಧಿಕೃತೆಯನ್ನು ಉಳ್ಳವನೆಂದು ಸ್ತುತಿಸಿದರು. ಶಿವ ಪ್ರತ್ಯಕ್ಷವಾಗಿ ರಾಕ್ಷಸ ಕಳೇಬರವನ್ನು ಕೊಯ್ದು ಮಾಂಸವನ್ನು ತೂಗಿ ಸಮಸ್ತ ದೇವತೆಗಳನ್ನು ಆರಾಧಿಸುವುದರಲ್ಲಿ ವೈಶ್ಯ ವೃತ್ತಯನ್ನು ಅವಲಂಬಿಸಿ ವಜ್ರ ವೈಡೂರ್ಯಗಳನ್ನು ಒಡವೆ ವಸ್ತ್ರಗಳನ್ನು ಸುಗಂಧ ದ್ರವ್ಯಗಳನ್ನು ಸರಬರಾಜು ಮಾಡುತ್ತಾ, ದೀರ್ಘಕಾಲ ಬಾಳಲಿ ಎಂದು ಆಶೀರ್ವಧಿಸಿದನು. ಗೌರಿದೇವಿಯ ಇಷ್ಟದಿಂದ, ಕುಂಭೋಧರನ ಮಗಳಾದ ಸುಪ್ರಭಯನ್ನು ಪೃಥ್ವೀಶ್ವರನಿಗೆ ಮದುವೆ ಮಾಡಿ ಅದೃಶ್ಯರಾದರು. ಪೃಥ್ವೀಶ್ವರನಿಗೆ ಸುಪ್ರಭಯಿಂದ ಸುನೇತ್ರ, ಸುದರ್ಶನ, ಸುಭಾಹು, ಮಣಿಗ್ರೇವ್, ಲಿಕಂಠ, ಸುನಾಭ, ಬಲಿ ಎಂಬ ಸಪ್ತ ಸಂತಾನವು ಉಂಟಾಯಿತು. ಇವರೆಲ್ಲ ಯಕ್ಷ ಗಂಧವರ ಕನ್ಯೆಯರನ್ನು ಮದುವೆಯಾದರು.

ಪೃಥ್ವೀಶ್ವರನ ವಂಶಸ್ಥರಾದ ಮುಮ್ಮಡಿ ಬಿಲ್ಲ ಶೆಟ್ಟರು ಕಾಂಚೀನಗರದಲ್ಲಿ ವಾಸಿಸುತ್ತಿದ್ದರು. ಒಂದಾನೊಂದು ಕಾಲದಲ್ಲಿ ಚೋಳನು ತನ್ನ ದೇಶ ರಕ್ಷಣೆಗಾಗಿ ದೂರ ದೇಶದಲ್ಲಿದ್ದ ಭಟ್ಟರಿಗೆ ಆಹಾರ ದ್ರವ್ಯಗಳನ್ನು ಸರಬರಾಜು ಮಾಡುವ ಉಪಾಯ ಕಾಣದೆ ಚಿಂತಿತನಾಗಿದ್ದನು. ಆಗ ಮಂತ್ರಿ ಬಿಲ್ಲಶೆಟ್ಟರು ಇದಕ್ಕೆ ತಕ್ಕವರಾಗಿದ್ದಾರೆ. ಎಂದು ಏಕ ಕಂಠದಲ್ಲಿ ಮಾಡಿದನು. ಕೂಡಲೇ ರಾಜನು ಮುಮ್ಮಡಿ ಬಿಲ್ಲಶೆಟ್ಟರೆ ಮಂದಿಗೆ ತಂಬೂಲ ಸತ್ಕಾರಗಳನ್ನು ಮಾಡಿ ತನ್ನ ಸಮಸ್ಯೆಯನ್ನು ತೋಡಿಕೊಂಡನು. ಮುಮ್ಮಡಿ ಬಿಲ್ಲಶೆಟ್ಟರು ನಾವು ಆಹಾರ ದ್ರವ್ಯಗಳನ್ನು ಸರಬರಾಜು

ಮಾಡುತ್ತೇವೆ ಎಂದು ಒಪ್ಪಿಕೊಂಡರು. ನಂತರ ಅವರು ಒಕ್ಕಲಿಗರಿಂದ ನೆಲವನ್ನು ಉಳಿಸಿ. ಬ್ರಹ್ಮಯಜ್ಞ ಕುಂಡದಿಂದ ಉದ್ಧರಿಸಿದ ಮರಗಳಿಂದ ನಾರನ್ನು ತೆಗೆದು ಗೋಣಿಗಳನ್ನು ಮಾಡಿದರು ಇಷ್ಟ ದೇವತೆಯನ್ನು ನೆನೆದು ಗೋಣಿ ಚೀಲಗಳಲ್ಲಿ ಧಾನ್ಯಗಳನ್ನು ತುಂಬಿ ಕುದುರೆ, ಕೋಣ, ಕತ್ತೆ, ಎತ್ತು, ಒಂಟೆಗಳಲ್ಲಿ ಹೇರಿಸಿಕೊಂಡು ಹೋಗಿ ಚೋಳರಾಜನ ಯುದ್ಧ ಭಟ್ಟರು ಇದ್ದ ಸ್ಥಳಗಳಿಗೆ ಆಹಾರ ದ್ರವ್ಯಗಳನ್ನು ಸಾಗಿಸಿದರು. ರಾಜನ 'ಜಗತ್ ರಕ್ಷಕ' ರೆಂದು ಬಿರುದು ಕೊಟ್ಟು ಕೈಗೂ, ಕಾಲಿಗೂ ಕಡಗಗಳನ್ನು ಕೊಟ್ಟನು. ಮುಮ್ಮಡಿ ಬಿಲ್ಲಶೆಟ್ಟರು ಕೇವಲ ಸತ್ವಗುಣ ಸಂಪನ್ನರಾಗಿದ್ದರಿಂದ ಸಾಧುಶೆಟ್ಟರೆಂದು ಹೆಸರಾದರು.

ಈ ಕಥೆಯಲ್ಲಿ ಬರುವ ಈ ವಂಶಗಳು ವೈಶ್ಯ ಸಮುದಾಯಕ್ಕೆ ಸೇರಿದಂತೆ ಕುಟುಂಬಗಳಾಗಿವೆ.

### ▫ ಪೌರಾಣಿಕ ಹಿನ್ನಲೆಯಲ್ಲಿ ಬೆಳಗಿದ ಮಹಾನುಭಾವರು :

ಸಮಾಧಿ ಓರ್ವಯೋಗಿ ಅಪಾರ ಜ್ಞಾನಿ, ತತ್ವಜ್ಞಾನಿಯಾಗಿದ್ದ ವೈಶ್ಯ ಹಿಂದೆ ಮಹನೀಯರಿಗೆ ತಾವು ಬಯಸಿದ ಲೋಕಾಂತರಗಳಿಗೆ ಹೋಗಿ ಬರುವ ಶಕ್ತಿಯಿತ್ತಂತೆ. ಸಮಾಧಿಯೂ ಆ ಶಕ್ತಿ ಪಡೆದಿದ್ದನು. ವೈಶ್ಯರ ಪ್ರತಿನಿಧಿಯಾಗಿ, ಸತ್ಯಲೋಕಕ್ಕೆ ಹೋಗಿ ಅಲ್ಲಿ ಬ್ರಹ್ಮಸಭೆಯಲ್ಲಿ ವೈಶ್ಯರ ಗೋತ್ರ ಪ್ರವರಗಳನ್ನು ಕುರಿತು ವಿವರಿಸಿದನಂತೆ ಹೀಗೆಂದು ಕನ್ಯಕಾಪುರಾಣದಲ್ಲಿ ಉಲ್ಲೇಖಿಸಿದೆ. ಲೌಕಿಕ ವ್ಯವಹಾರಗಳಲ್ಲಿ ಹೆಚ್ಚು ಆಸಕ್ತಿಯಿಲ್ಲದೆ, ಪಾರಮಾರ್ಥಿಕ ಚಿಂತನೆಯಲ್ಲಿ ಅವರ ವಿಶೇಷ ಶ್ರದ್ಧೆಯಿದ್ದುದು ಗಮನ ಸಳೆಯುತ್ತದೆ.

ಸಮಾಧಿಯ ಮಹಾಧನಿಕನಾಗಿದ್ದಗ್ಯೂ ಹೆಂಡತಿ, ಮಕ್ಕಳು, ಪ್ರಾಪಂಚಿಕ ಭೋಗ ಭಾಗ್ಯಗಳ ಬಗ್ಗೆ ನಿರ್ಲಿಪ್ತನಾಗಿ, ಪ್ರಶಾಂತತೆ ಅರಸಿ ಹೊರಟನು. ಸಮೇಧನೆಂಬ ಮುನಿಯ ಆಶ್ರಮಕ್ಕೆ ತೆರಳಿ ತನ್ನ ಮನದ ಆಶಯಗಳನ್ನು ಹಂಚಿಕೊಂಡನು. ಮುನಿಯ ಆದೇಶದಂತೆ ವಿಷ್ಣುವಿನ ಮಾಯಾ ಸ್ವಭಾವ ಹಾಗೂ ಅದರ ಸಿದ್ಧಿಯ ವಿಧಾನವನ್ನು ಅರಿತು, ನಂತರ ನದಿಯ ತೀರದಲ್ಲಿ ಆದಿಪರಾಶಕ್ತಿಯನ್ನು ಉಪಾಸನೆ ಮಾಡಿ ಉಗ್ರತೆ ಪೋನುಷ್ಠಾನ ಮಾಡಿದನು. ತಪಶ್ಯಕ್ತಿಯ ಹಂತದಲ್ಲಿ ಸಮಾದಿಯ ವಿಶಿಷ್ಟತೆ ಅಭಿವ್ಯಕ್ತವಾಗುತ್ತದೆ. ನನಗೆ ಯಾವುದೇ ಸ್ಥಾನಮಾನ ಸುಖಬೋಗ ಬೇಕಿಲ್ಲ, ನಾನೊಬ್ಬನೇ ಮೋಕ್ಷ ಪಡೆಯುವುದೂ ನನ್ನ ಗುರಿಯಲ್ಲ. ನನ್ನ ತಂದೆ ತಾಯಿ ಎಲ್ಲರ ವಂಶಗಳಿಗೆ ಸೇರಿದ ಜನರೊಂದಿಗೆ ನನಗೆ ಮೋಕ್ಷ ಭಾಗ್ಯ ಅನುಗ್ರಹಿಸು ಎಂದು

ಬಹುಜನಪಯೋಗಿ ಬೇಡಿಕೆ ಮಂಡಿಸಿದಾಗ ದೇವಿಯು "ಈ ಆಶಯ ಈ ಜನ್ಮದಲ್ಲಿ ಈಡೇರಲು ಸಾಧ್ಯವಿಲ್ಲವಾದರೂ ಮುಂದಿನ ಜನ್ಮದಲ್ಲಿ ಈಡೇರುವುದೆಂದು ಹೇಳಿ ಮಾಯವಾದಳು.

ದೇವಿಯ ಅನುಗ್ರಹದಿಂದ ಸಮಾಧಿಯೇ ಮರು ಜನ್ಮದಲ್ಲಿ ಕಲ್ಹಾರನ ಮಗ ಕುಸುಮ ಶ್ರೇಷ್ಠಿಯಾಗಿ ಜನಿಸಿದನು. ಜೊತೆಗೆ ಆದಿಪರಾಶಕ್ತಿಯ ಅವತಾರವೆನಿಸಿ, ವಾಸವಾಂಭೆಯಾ ಆತನ ಮಗಳಾಗಿ ಜನ್ಮ ತಳೆವ ಭಾಗ್ಯ ಲಭಿಸಿತು. ಯೋಗಿ ಸಮಾಧಿಯ ಜೀವನ ನಮಗೆ ಸರ್ವಧಾ, ನಿಸ್ವಾರ್ಥತೆಯ ಸಂಕೇತವಾಗಿ ಮಾರ್ಗದರ್ಶಿಯಾಗಿದೆ.

## 2.3 ವೈಶ್ಯ ಪರಂಪರೆ

○ **ಕಾನಿಷ್ಕನ ಕಾಲದಲ್ಲಿ ವೈಶ್ಯರ ನಡುವಳಿಕೆ – (ಕ್ರಿ.ಶ. 120)**

ಕಾನಿಷ್ಕನ ನಿಧನಾ ನಂತರ (ಕ್ರಿ.ಶ. 120) ಇನ್ನೂರು ವರ್ಷಗಳು ಸಮರ್ಥ ಅರಸರಿಲ್ಲದೆ ದೇಶದಲ್ಲಿ ಪ್ರಗತಿಯಾಗಲಿಲ್ಲ. ಉತ್ತರ ಭಾರತದಲ್ಲಿ ಸಣ್ಣ ಸಣ್ಣ ರಾಜರು, ಸಾಮಂತರು ಸ್ವತಂತ್ರ್ಯವಾಗಿ ತಮ್ಮ ತಮ್ಮ ರಾಜ್ಯಗಳನ್ನು ಆಳುತ್ತಿದ್ದರು. ಅವರಿಗೆ ಆದಾಯ ಕಡಿಮೆ. ಅವರಿಂದ ಅಭಿವೃದ್ಧಿಯನ್ನು ನಿರೀಕ್ಷಿಸುವಂತಿರಲಿಲ್ಲ. ಆದರೆ ಸಾಮಾಜಿಕವಾಗಿ ಆ ಕಾಲದಲ್ಲಿ ಪರಿವರ್ತನಗಳಾಯಿತು. ಮೂರು ನೂರು ವರ್ಷಗಳ ಹಿಂದೆ ಚಂದ್ರಗುಪ್ತ ಮೌರ್ಯ ಮತ್ತು ಅಶೋಕ ಚಕ್ರವರ್ತಿಗಳ ಕಾಲದಲ್ಲಾದ "ದೂರದ ನಗರಗಳಿಗೆ ಸಂಪರ್ಕ ಕಲ್ಪಿಸಿದ ಹೆದ್ದಾರಿಗಳು ದಾರಿಯ ಪಕ್ಕದ ತಂಗುದಾಣಗಳು" ವ್ಯಾಪಾರಭಿವೃದ್ದಿಯಾಗಲು ನೆರವಾದವು. ರಸ್ತೆ ಪಕ್ಕದಲ್ಲಿ ನಗರಗಳ ರಚನೆಯಾಗಿದ್ದಿತು. ದೇಶದ ಒಂದಡೆ ದುರ್ಭಿಕ್ಷೆ ಮತ್ತೊಂದುಡೆ ಸುಭಿಕ್ಷೆಯಾದರೂ ರಸ್ತೆ ಸಂಪರ್ಕಗಳಿಂದಾಗಿ ಆಹಾರ ಧಾನ್ಯಗಳು ಅಗತ್ಯ ವಸ್ತುಗಳೆ ಸರಬರಾಜಿಗೆ ದುರ್ಭಿಕ್ಷೆಯ ಬೀಕರತೆ ಕಡಿಮೆಯಾಗುತಿತ್ತು, ಸರೋವರ, ಕೆರೆ, ಕಟ್ಟೆಗಳ ನಿರ್ಮಾಣದಿಂದಾಗಿ ನೀರಾವರಿ ಭೂಮಿ ವಿಸ್ತಾರವಾಗಿ ವ್ಯವಸಾಯಕ್ಕೆ ಅನುಕೂಲವಾಗಿದ್ದಿತು.

ಭೂಮಾಲೀಕರಾಗಿದ್ದ ವೈಶ್ಯರು ವ್ಯಾಪಾರಭಿವೃದ್ದಿಯಿಂದಾಗಿ ಕಡಿಮೆ ಶ್ರಮ, ಹೆಚ್ಚಿನ ಆದಾಯದ ವ್ಯಾಪಾರಕ್ಕೆ ಆಧ್ಯತೆ ನೀಡಿದ್ದರಿಂದ ವ್ಯವಸಾಯ ಮಾಡಿಸಲು ಸಮಯವಿಲ್ಲವಾಯಿತು. ವ್ಯಾಪಾರ ನಿಮಿತ್ತ ಹಳ್ಳಿಗಳನ್ನು ತೊರೆದು ಶ್ರೀಮಂತ ವರ್ತಕರು ಪಟ್ಟಣ ನಗರಗಳನ್ನು ಸೇರಿದ್ದರಿಂದ ಅವರ ವಶದಲ್ಲಿದ್ದ ಭೂಮಿ ನಿರ್ವಹಿಸುವವರಿಲ್ಲದೆ ಬೀಳು ಬಿದ್ದಿತು. ಸಣ್ಣ ಪುಟ್ಟ ಭೂ ಮಾಲೀಕರಾದ

ಸಣ್ಣ ವ್ಯಾಪಾರಿಗಳು ಹಳ್ಳಿಗಳಲ್ಲಿ ನೆಲಸಿದ್ದು, ವ್ಯವಸಾಯ ಭೂಮಿ ವಿಸ್ತರಿಸಿದ್ದರಿಂದ ಅದಕ್ಕೆ ತಕ್ಕಂತೆ ವ್ಯವಸಾಯ ಬಲ್ಲ ಶ್ರಮಿಕರು. ('ಒಕ್ಕಲು ಜನ') ಲಭ್ಯವಿಲ್ಲದೆ ಕೆಲವಡೆ ಭೂಮಿ ಬೀಳು ಬಿತ್ತು. ಶ್ರೀಮಂತ ವ್ಯಾಪಾರಿ ಭೂ ಮಾಲೀಕರು ತಮ್ಮಲ್ಲಿದ್ದ 'ಒಕ್ಕಲು' ಜನರನ್ನು ದೂರದ ಊರುಗಳಿಂದ ನಿಯಂತ್ರಿಸಿ ಅವರಿಂದ ಕೆಲಸ ಮಾಡಿಸುವುದು ದುಃ ಸಾಧ್ಯವಾಯಿತು. ಅಂದು ಶ್ರಮಿಕರಗೆ (ಒಕ್ಕಲು ಜನರಿಗೆ) ಭೂ ಒಡೆತನದ ಹಕ್ಕು ಇರಲಿಲ್ಲ, ಅವರೇನಿದ್ದರೂ ದ್ವಿ ಜರ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ )ಬಳಿ ಕೆಲಸ ಮಾಡಬೇಕಾಗಿತ್ತು. ಅವರಿಗೆ ಉಟೋಪಚಾರಗಳಿಂದ ಹಿಡಿದು ಮದುವೆ ಮತ್ತು ಕುಟುಂಬ ನಿರ್ವಹಣೆಗೆ ಬೇಕಾದುದನ್ನು ಭೂ ಮಾಲೀಕರೇ ನೀಡುತ್ತಿದ್ದರು. ಈ ಶ್ರಮಿಕರಿಗೆ ದುಡಿಯಲು ಸಮಯದ ಮಿತಿಯಿರಲಿಲ್ಲ. ಭೂ ಮಾಲೀಕನ ಭೂಮಿಯಲ್ಲಿಯೇ ಇವರಿಗೆ ವಾಸಿಸಲು ವ್ಯವಸ್ಥೆಯಾಗಿತ್ತು. ಈ ಪದ್ದತಿಯು ಯುಗ ಯುಗಗಳಿಂದ ನಡೆದುಕೊಂಡು ಬಂದಿತ್ತು. ಬ್ರಾಹ್ಮಣರಿಗೆ ಅರಸರೂ ಶ್ರೀಮಂತರೂ ನೀಡಿದ ಭೂಮಿಯಿದ್ದರೆ, ಕ್ಷತ್ರಿಯರಿಗೆ ರಾಜರು ನೀಡುತ್ತಿದ್ದ ಕೊಡಿಗೆಯ ಭೂಮಿ ಇರುತ್ತಿತ್ತು. ಇವೆರಡೂ ಬಗ್ಗೆಯವೂ ಸ್ವಲ್ಪ ಭಾಗವಾದರೆ ಹೆಚ್ಚಿನ ಭಾಗ ವ್ಯಶ್ಯರದಾಗಿತ್ತು. ಅಂದು ವ್ಯವಸಾಯ ವ್ಯಾಪಾರ, ಪಶುಪಾಲನೆ ವೈಶ್ಯರ ವೃತ್ತಿಯಾಗಿದ್ದತ್ತು. ವ್ಯವಸಾಯದ ಭೂಮಿಯ ಪೂರ್ಣ ಬಳಕೆಗಾಗಿ ಮತ್ತು ತಮ್ಮಲ್ಲಿದ್ದ ಒಕ್ಕಲು ಜನರಿಗೆ ಜೀವನ ನಿರ್ವಹಿಸಲು ಅನುಕೂಲವಾಗುವಂತಹ ನಿರ್ಧಾರವನ್ನು ವೈಶ್ಯ ಭೂಮಾಲೀಕರು ತೆಗೆದುಕೊಂಡರು. ಇದು ಅಂದಿನ ಧರ್ಮಶಾಸ್ತ್ರಗಳಿಗೆ ವಿರುದ್ದವಾದರೂ ವೈಶ್ಯರು ತೆಗೆದುಕೊಂಡ ಸಮಾಜ ಪರಿವರ್ತನೆಯ ಮಹತ್ತರ ನಿರ್ಧಾರವಾಯಿತು. "ಅದೇ ಶೂದ್ರರಿಗೆ ಭೂ ಒಡೆತನದ ಹಕ್ಕು ನೀಡಿದ್ದು".

ವೈಶ್ಯ ಭೂ ಮಾಲೀಕರು ದೂರದ ಊರಿನಲಿದ್ದು ವ್ಯವಸಾಯ ಮಾಡಿಸಲಾಗದಿದ್ದಲ್ಲಿ ಹೆಚ್ಚು ಭೂಮಿ ಹೊಂದಿದ್ದವರು ತಮ್ಮ ಭೂಮಿಯಲ್ಲಿ ಸ್ವಲ್ಪ ಭಾಗವನ್ನು ಇದುವರೆವಿಗೂ ತಮ್ಮಲ್ಲಿದ್ದ ಒಕ್ಕಲುಗಳಿಗೆ ನೀಡುವುದು (ಒಡೆತನ ನೀಡುವುದು) ಉಳಿದ ಭೂಮಿಯಲ್ಲಿ ಬೆಳೆ ಗುತ್ತಿಗೆ ನೀಡಿ ಅವರಿಗೆ ಬೇಕಾದ ಬೀಜ, ಗೊಬ್ಬರ ನೀಡಿ ಅವರು ಬೆಳೆದ ಬೆಳೆಯಲ್ಲಿ ಅರ್ಧಭಾಗ ಪಡೆಯುವುದು. ಹಳ್ಳಿ ಊರುಗಳಲ್ಲಿಯೇ ನೆಲಸಿರುವ ಭೂ ಮಾಲೀಕರು ಹಿಂದಿನ ಪದ್ಧತಿ ಮುಂದುವರೆಸುವ ಅಥವಾ ಒಕ್ಲಲುಗಳಿಗೆ ಕೂಲಿ ನೀಡಿ ಕೆಲಸ ಮಾಡಿಸುವ ಅಥವಾ ಬೆಳೆ ಗುತ್ತಿಗೆ ಕೊಡುವ ಯಾವುದು ಉಭಯತ್ರಗಿಗೂ ಅನುಕೂಲವೋ ಅದನ್ನು ಅನುಸರಿಸುವುದು. ಈ ಕ್ರಮಗಳಿಂದಾಗಿ ಭೂಮಿ ಬೀಳು ಬಿಡುವುದು ತಪ್ಪಿತು ಹೆಚ್ಚಿನ ಧಾನ್ಯ ಬೆಳೆಯಲು ಸಾಧ್ಯವಾಯಿತು.

ಯುಗ ಯುಗಗಳಿಂದ ಭೂ ಮಾಲೀಕತ್ವದಿಂದ ವಂಚಿತರಾದ ಶೂದ್ರರಿಗೆ ಭೂ ಒಡೆತನ ನೀಡಿದ ಕೀರ್ತಿ ವೈಶ್ಯರದಾಯಿತು.

ದ್ವಿಜರ ಭೂಮಿಗಳಲ್ಲಿ ದುಡುಯುತ್ತಿದ್ದ ಶೂದ್ರ ಒಕ್ಕಲಿಗರಿಗೆ ಭೂ ಒಡೆತನದ ಪ್ರಾಪ್ತಿಯಾದ ದನ, ಕರುಗಳನ್ನು ಸಾಕಿ, ಹಾಲು ಮೊಸರು ಮಾರುತ್ತಿದ್ದವರು ಗೋಪಾಲಕರೆಂದು (ಗೊಲ್ಲರು) ಹೆಸರಾದರು. ಇವರನ್ನು ಶ್ರೀ ಕೃಷ್ಣನ ಕಾಲದಿಂದ ಯಾದವರೆಂದು ಕರೆಯುತ್ತಿದ್ದರು. ಇವರು ವೈಶ್ಯರಾಗಿದ್ದರು.

ಒಕ್ಕಲಿಗರಿಗೆ ರೈತರೆಂದು ಹೆಸರಾಯಿತು. ಇವರಿಗೆ ಭೂ ಒಡೆತನ ಗುತ್ತಿಗೆ ಕೂಲಿ ನೀಡುವ ಪದ್ಧತಿಗಳಿಂದಾಗಿ ಹೆಚ್ಚಿನ ಹಣ ಸೇರಿತು. ತಮ್ಮ ಭೂಮಿಯ ಅಕ್ಕಪಕ್ಕದ ದ್ವಿಜರ ಭೂಮಿಯನ್ನು ಕೊಂಡು ಕೊಂಡರು. ಹೀಗೆ ದ್ವಿಜರಿಂದ ಭೂ ಮಾಲೀಕತ್ವ ಪಡೆದ ರೈತರು ಇತರೆ ಶೂದ್ರರಿಗಿಂತ ಗಣ್ಯ ಸ್ಥಾನವನ್ನು ಪಡೆದರು.

ಕುರಿ, ಆಡು ಸಾಕುವವರು ಕುರುಬರೆಂದೂ, ಎಣ್ಣೆ ತೆಗೆಯುವವರು ಗಾಣಿಗರೆಂದೂ, ಬಟ್ಟೆ ನೇಯುವವರು ನೇಕಾರರೆಂದೂ ಹೆಸರಾದರು. ಈ ಮೊದಲೇ ಪುರಾಣ ಕಾಲದಿಂದ ಬೆಸ್ತರು. ಬೇಡರು ಎಂಬ ಜಾತಿಗಳಿದ್ದವು. ಗೊಲ್ಲರು, ಗಾಣಿಗರು ನೇಕಾರರು ತಾವು ಹಿಂದೆ ವೈಶ್ಯರಾಗಿದ್ದುದರ (ದ್ವಿಜರ) ಸಂಕೇತವಾಗಿ ಈಗಲೂ ಜನಿವಾರವನ್ನು ವಿವಾಹ ಮತ್ತಿತರ ಧಾರ್ಮಿಕ ಕಾರ್ಯಗಳಲ್ಲಿ ಹಾಕಿಕೊಳ್ಳುತ್ತಾರೆ. ತಮ್ಮ ವೃತ್ತಿಯ ದಸೆಯಿಂದ ವೈಶ್ಯರಂತೆ ಆಚಾರ, ವಿಚಾರಗಳನ್ನು ಮಾಡಲಾಗದೆ ಬಿಟ್ಟು ಶೂದ್ರರಂತೆ ಮಾಂಸಾಹಾರ ಸೇವಿಸುತ್ತಾರೆ.

### ○ ರೈತರಿಗೆ ಹಳ್ಳಿ, ಊರುಗಳು ಯಜಮಾನತನ :

ಹಳ್ಳಿಗಳ ಮುಖಂಡರಾಗಿದ್ದ ವೈಶ್ಯ ಭೂ ಮಾಲೀಕರು ಪಟ್ಟಣ ನಗರಗಳಿಗೆ ವಲಸೆ ಹೋದುದರಿಂದ ಶ್ರೀಮಂತ ರೈತರು ಹಳ್ಳಿಯ ಯಜಮಾನರಾದರು. ಹೀಗೆ ಹಳ್ಳಿಯ ಯಜಮಾನರಾದವರಿಗೆ "ಗೌಡ" ರೆಂದು ಹೆಸರಾಯಿತು. ಪಟ್ಟಣ ನಗರಗಳ ಯಜಮಾನಿಕೆ ವೈಶ್ಯರಲ್ಲೇ ಉಳಿದು "ಪಟ್ಟಣ ಶೆಟ್ಟಿ" ಎಂದು ಹೆಸರಾಯಿತು.

○ **ಸ್ಥಳೀಯ ಆಡಳಿತ :**

ಹಳ್ಳಿ ನಗರಗಳ ಆಡಳಿತವು ಗೌಡ, ಪಟೇಲ, ಪಟ್ಟಣ ಶೆಟ್ಟರ ನೇತೃತ್ವದಲ್ಲಿ ನಡೆಯುತ್ತಿದ್ದು ಇವರಿಗೆ ಊರಿನ ಅಭಿವೃದ್ಧಿ ಮತ್ತು ರಾಜರಿಗೆ ತೆರೆಗೆ ಸಂಗ್ರಹಿಸಿ ಕಳುಹಿಸುವ ಹೊಣೆಯಿದ್ದಿತು. ರಾಜ ಮಹಾರಾಜರು ಬದಲಾದರೂ, ಸ್ಥಳೀಯ ಆಡಳಿತದಲ್ಲಿ ಅವರು ಕೈಹಾಕುತ್ತಿರಲಿಲ್ಲವಾಗಿ, ಸ್ಥಳೀಯ ಆಡಳಿತ ಇವರ ಕೈಯಲ್ಲಿ ಸುರಕ್ಷಿತವಾಗಿದ್ದಿತು. ಇವೆಲ್ಲಾ ಪರಿವರ್ತನೆಯಾಗಲು ಇನ್ನೂರು ವರ್ಷಗಳು ಹಿಡಿಯಿತು.

○ **ಸನಾತನ ಧರ್ಮದಲ್ಲಾದ ಪರಿವರ್ತನೆಗಳು :**

ಸಾಮಾಜಿಕವಾಗಿ ಪರಿವರ್ತನೆಗಳಾದಂತೆ ಈ ಕಾಲದಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಪರಿವರ್ತನೆಗಳಾಯಿತು. ದೊಡ್ಡ ಸಾಮ್ರಜ್ಯಗಳೂ ಮಹಾರಾಜರೂ ಇದ್ದಾಗ ರಾಜರ, ಮತ (ಜಾತಿ) ಧೋರಣೆ, ಉಚ್ಚಾಯ ಸ್ಥಿತಿಗೇರಿತ್ತಿತ್ತು. ಹೆಚ್ಚಿನ ಜನರು ರಾಜಮನೆತನಕ್ಕೆ ಸೇರುತಿದ್ದರು. ರಾಜರಾದವರು ಮತ ಭೇದವಿಲ್ಲದೆ ಬ್ರಾಹ್ಮಣ ಪಂಡಿತರಿಗೂ, ಭೌದ್ದಗುರುಗಳಿಗೂ ಜಿನಾಲಯಗಳಿಗೂ ಕೊಡುಗೆ ನೀಡುತ್ತಿದ್ದುದರಿಂದ ಆಯ ಧರ್ಮ ಗುರುಗಳು ರಾಜರ ಬೆಂಬಲದಿಂದ ಜನರ ಮೇಲೆ ತಮ್ಮ ನಿಯಂತ್ರಣ ವಿಟ್ಟುಕೊಳ್ಳುತ್ತಿದ್ದರು. ಪ್ರಸ್ತುತ ಕಾಲದಲ್ಲಿ ದೊಡ್ಡ ರಾಜರು ರಾಜ ಬೆಂಬಲಿತ ಗುರುಗಳು ಇಲ್ಲದಿದ್ದುದರಿಂದ ಸಾಮಾನ್ಯ ಜನರು ತಮಗೆ ಹಿತವಾಗುವಂತೆ ಧಾರ್ಮಿಕವಾಗಿಯೂ ಪರಿವರ್ತನೆಗಳನ್ನು ಮಾಡಿಕೊಂಡರು.

ಭೌದ್ದ ಗುರುಗಳು ರಾಜಾಶ್ರಯದಲ್ಲಿ ಶ್ರೀಮಂತ ಭಕ್ತರಲ್ಲಿ ಒಲವು ಮೂಡಿಸಿಕೊಂಡು ಜನ ಸಾಮಾನ್ಯರಿಂದ ದೂರವಾದುದರಿಂದ ಭೌದ್ಧಮತ ಬೆಳವಣಿಗೆಯಾಗಲಿಲ್ಲ. ಟಿಬೆಟ್, ಚೀಣಾ ಕಡೆ ಹೋದ ಭೌದ್ಧ ಗುರುಗಳು ಅಲ್ಲಿ ಶ್ರದ್ಧೆಯಿಂದ ಭೌದ್ಧ ಮತ ಬೆಳೆಸಿದರು. ಜೈನ ಮತವೂ ಜನರನ್ನು ಸೆಳೆಯಲಾಗಲಿಲ್ಲ, ಪಂಡಿತರಿಗೆ, ಬ್ರಾಹ್ಮಣ ವಿದ್ವಾಂಸರಿಗೆ ಅರಸರ ನೆರೆವು ಕುಂಟಿತಗೊಂಡಿದ್ದರಿಂದ ಅವರ ಹಿಡಿತವು ಜನ ಸಾಮಾನ್ಯರಲ್ಲಿ ಸಡಿಲವಾಯಿತು. ಅಪಾರ ವೆಚ್ಚದ ಹೋಮ, ಯಜ್ಞಗಳು ನಿಂತು ಹೋಯಿತು. ಬ್ರಾಹ್ಮಣ ವಿದ್ವಾಂಸರು ದ್ವಿಜರ ಮನೆಗಳಲ್ಲಿ ಹಬ್ಬ ಧಾರ್ಮಿಕ ಶಾಸ್ತ್ರಗಳನ್ನು ಮಾಡಿಸುತ್ತಾ ದ್ವಿಜರ ಮಕ್ಕಳಿಗೆ ಪಾಠ ಹೇಳುತ್ತಾ ಜೀವನ ನಡೆಸುತ್ತಿದ್ದರು. ಬ್ರಾಹ್ಮಣರಿಗೆ ಜೀವನ ನಿರ್ವಹಣೆಗೆ ಕಷ್ಟವಾಗಿದ್ದು, "ಬಡಬ್ರಾಹ್ಮಣ"ರೆಂದು ಕರೆಯಲ್ಪಟ್ಟರು.

"ಗ್ರೀಕ್ ವಿಗ್ರಹ" ಗಳಿಂದ ಪ್ರೇರಣೆ ಪಡೆದ ವೈಶ್ಯ ಅಶ್ವಘೋಷನು ಬುದ್ಧನ ವಿಗ್ರಹಗಳನ್ನು ರೂಪಿಸಿ, ಕಾವ್ಯ ನಾಟಕಗಳನ್ನು ರಚಿಸಿ ಭೌದ್ಧ ಮತವನ್ನು ಪುನರುಜ್ಜೀವಗೊಳಿಸಿದುದನ್ನು ಕಂಡ ಸನಾತನ ಧರ್ಮೀಯರು (ಹಿಂದೂಗಳು) ತಾವು ತಮ್ಮ ನೆಚ್ಚಿನ ದೇವರ ವಿಗ್ರಹಗಳನ್ನು ಮಾಡಿಸಿ ದೇವಾಲಯಗಳನ್ನು ರಚಿಸಿ, ಪೂಜಿಸಲಾರಂಭಿಸಿದರು. ಇದುವರೆವಿಗೂ ಬ್ರಾಹ್ಮಣ ಪಂಡಿತರ ಮಂತ್ರಗಳಲ್ಲಿ ಅಡಕವಾಗಿದ್ದ ಪೂಷನ್ (ಸೂರ್ಯ) ಅಗ್ನೆ, ಇಂದ್ರ, ಕುಬೇರರು ಮರೆಯಾಗಿ ಅವರ ಸ್ಥಾನವನ್ನು ಪುರಾಣಗಳ ದೇವರಾದ ಶಿವ, ದುರ್ಗಿ, ಶ್ರೀಕೃಷ್ಣ ಬಲರಾಮ (ಸಂಕರ್ಷಣ)ರು ಹೊಂದಿದರು. ಶ್ರೀ ರಾಮನೂ ಜನರ ಆದರ್ಶವಾದನು. ಕಲಿಯುಗದ ಮುನ್ನಿನ ದ್ವಾಸರ ಯುಗದ ಅಂತ್ಯದಲ್ಲಿ ಆಡಳಿತದಲ್ಲಿ ನಡೆಸಿದ ಮಹಾಭಾರತದ ಪಾಂಡವರ ವಂಶಸ್ಥರೂ. ಶ್ರೀ ಕೃಷ್ಣನ ವಂಶಸ್ಥರೂ ಇತಿಹಾಸ ಕಾಲದಲ್ಲಿ ರಾಜರಾಗಿದ್ದುದರಿಂದ ಅವರು ಬಲಾಡ್ಯರಾದ ನಂದ, ಮೌರ್ಯ, ಕುಶಾನರಲ್ಲಿ ಸಾಮಂತರಾಗಿ, ಅವರ ಸಾಮ್ರಾಜ್ಯ ಪತನವಾದಾಗ ಸ್ವತಂತ್ರ್ಯರಾಗಿ ಸಣ್ಣ ಪುಟ್ಟರಾಜ್ಯಗಳನ್ನು ಅಳುತ್ತಿದ್ದರು. ಪಾಂಡವರ ಕಥೆಯೂ ಶ್ರೀಕೃಷ್ಣನ ಕಥೆಯೂ ಜನ ಸಾಮಾನ್ಯರಲ್ಲಿ ಜನ ಜನಿತವಾಗಿದ್ದಿತು. "ವಾಸುದೇವ ಕೃಷ್ಣನಲ್ಲಿ" ಭಕ್ತಿಯುಂಟುಮಾಡಿತ್ತು. ಶ್ರೀ ಕೃಷ್ಣ ಪ್ರಧಾನವಾದ 'ಭಾಗವತವು' ಗುಪ್ತರ ಕಾಲದಲ್ಲಿ ರಚನೆಯಾಗಲು ನಾಂದಿಯಾಯಿತು.

○ **ಅಶೋಕನ ಶಾಸನಗಳ ಸಾರ :**

ತಂದೆ ತಾಯಿಯರನ್ನು ಗೌರವಿಸಬೇಕು. ಗುರು ಹಿರಿಯರಲ್ಲಿ ಗೌರವವಿರಬೇಕು, ಪ್ರಾಣಿ ಪಕ್ಷಿಗಳನ್ನು ತನ್ನಂತೆ ಕಾಣಬೇಕು. ಅಹಿಂಸೆಯೆ ಪರಧರ್ಮ, ಪ್ರಾಣಿಬಲಿ ಮಾಡಬಾರದು. ಸತ್ಯವನ್ನೇ ಹೇಳಬೇಕು. ಧರ್ಮದಂತೆ ನಡೆಯಬೇಕು. ನೆಂಟರಿಷ್ಟರಲ್ಲಿ ಸ್ನೇಹಿತರಲ್ಲಿ ಸೌಜನ್ಯದಿಂದ ವರ್ತಿಸಬೇಕು. ಇತರ ಧರ್ಮಗಳನ್ನು ತನ್ನ ಧರ್ಮದಂತೆ ಕಾಣಬೇಕು. ಗೌರವಿಸಬೇಕು. ಹೀಗೆ ಕಾಣುವುದರಿಂದ ತನ್ನ ಧರ್ಮಕ್ಕೂ ಹಿತಪರ ಧರ್ಮಕ್ಕೂ ಹಿತ ಯಾರು ತನ್ನ ಮತದ ಅಲೆ ಅಭಿಮಾನದಿಂದ ಪರಮತವನ್ನು ದೋಷಿಸುತ್ತಾರೋ ಅವರು ತನ್ನ ಮತಕ್ಕೂ ಹಾನಿಯುಂಟು ಮಾಡಿ. ಪರಮತಕ್ಕೂ ಕೆಡಕು ಮಾಡುವವರಾಗಿರುತ್ತಾರೆ. ಜನರಲ್ಲಿ ಸ್ನೇಹ, ಪ್ರೀತಿ, ಸಹನೆ, ಸೋದರ ಭಾವನೆ ಬೆಳೆಸುವುದೇ ಎಲ್ಲಾ ಧರ್ಮಗಳ ಮೂಲ ಧ್ಯೇಯ, ಧರ್ಮ, ಸಹಿಷ್ಣುತೆಯೂ ಸರ್ವರಿಗೂ ಹಿತಕಾರಿ ಈ ಯಯ್ಯುಗಳನ್ನು ಸಾರಲು "ಧರ್ಮಮಹಾಮಾತ್ರ" ರೆಂಬ ಅಧಿಕಾರಿಗಳನ್ನು ನೇಮಿಸಿದನು. ಇವರು ದೇಶಾಧ್ಯಂತ ವಿದೇಶಗಳಲ್ಲೂ ಸಂಚರಿಸಿ ಅಶೋಕನ ಧರ್ಮವನ್ನು ಪ್ರಚಾರ ಮಾಡಿದರು.

○ **ಅಶೋಕ ಸ್ತಂಭ :**

ಸಾರನಾಥದಲ್ಲಿ ಅಶೋಕ ಒಂದು ಸ್ತಂಭವನ್ನು ನಿರ್ಮಿಸಿದನು. ಇದರಲ್ಲಿ ಮೇಲ್ಭಾಗದಲ್ಲಿ 32 ಅರೆಗಳಿಂದ ಕೂಡಿದ ಧರ್ಮಚಕ್ರವೂ ಅದರಡಿಯಲ್ಲಿ ನಾಲ್ಕು ದಿಕ್ಕುಗಳಿಗೆ ಮುಖ ಮಾಡಿ ನಿಮತ ನಾಲ್ಕು ಸಿಂಹಗಳು ಶಾಂತಿ ಸಂದೇಶ ಸಾರುವಂತೆ ಕೆತ್ತಸಿದನು. ಅದರಡಿ ಪೀಠದಲ್ಲಿ ಅಶೋಕ ಚಕ್ರವೂ ಸಿಂಹ, ಆನೆ, ಕುದುರೆ, ಎತ್ತುಗಳನ್ನು ಕೆತ್ತಿಸಿದನು.

ರಾಷ್ಟ್ರಧ್ವಜದಲ್ಲೂ ಅಶೋಕ ಚಕ್ರವನ್ನು ಅಳವಡಿಸಿಕೊಂಡು ಗಾಂಧೀಜಿಯವರ ಅಹಿಂಸಾತ್ಮಕ ಹೋರಾಟದ ಮೂಲಕ ಸ್ವತಂತ್ರ ಪಡೆದ ಭಾರತವು ರಾಷ್ಟ್ರ ಚಿಹ್ನೆಯಾಗಿ ಭಾರತದ ಮೊದಲ ಅಹಿಂಸಾವಾದಿ ದೊರೆ. ಅಶೋಕನ ಲಾಂಛನಗಳನ್ನು ಪಡೆದದ್ದು ಸಮರ್ತನೀಯವಾಗಿದೆ. 37 ವರ್ಷಗಳ ಕಾಲ ಪ್ರಜಾಹಿತಭಿಲಾಷೆಯಾಗಿ, ಅಹಿಂಸೆಯ ಪ್ರತಿಪಾದಕನಾಗಿ ಆಡಳಿತ ನೆಡೆಸಿದ ಅಶೋಕ ಚಕ್ರವರ್ತಿ ಲೋಕ ವಿಖ್ಯಾತವಾಗಿ ಕ್ರಿ.ಪೂ. 233 ರಲ್ಲಿ ವೃತನಾದನು. ಅಶೋಕನಂತಹ ದೊರೆಯು ಈ ಎರಡು ಸಾವಿರ ವರ್ಷಗಳಲ್ಲಿ ಒಬ್ಬರೂ ಕಾಣಲಿಲ್ಲವೆನ್ನಬಹುದು.

ಅಶೋಕನ ಅಂತಿಮ ಕಾಲದಲ್ಲಿ ಅಮಾತ್ಯ (ಮುಖ್ಯ ಮಂತ್ರಿ) ರಾಧಗುಪ್ತ, ಸ್ನೇಹಿತ, ಮಾರ್ಗದರ್ಶಯಾಗಿದ್ದ, ಭೌದ್ಧಗುರು ಉಪಗುಪ್ತ ರಾಣಿ ದೇವಿ ಇಹಲೋಕ ತ್ಯಜಿಸಿದರು. ಹತ್ತಾರು ವರ್ಷಗಳ ಹಿಂದೆಯೇ ಹಿರಿಯ ಮಗ 'ಮಹೇಂದ್ರ' ಮತ್ತು ಮಗಳು 'ಸಂಘಮಿತ್ರ' ಭೌದ್ಧ ಸನ್ಯಾಸಿಗಳಾಗಿದ್ದರು. 'ಲೇವಲ' ನೆಂಬ ಮಗ ತೀರಿಕೊಂಡನು. ಮತ್ತೊಬ್ಬ ಮಗ 'ಜಲಾಕನು' ಉದ್ದಟನಾಗಿದ್ದರಿಂದ ಅವನನ್ನು ಕಾಶ್ಮೀರ ಪ್ರಾಂತ್ಯಾಧಿಕಾರಿಯನ್ನಾಗಿ ಮಾಡಿ ಅರಮನೆಯ ಕಲಹವನ್ನು ನಿಯಂತ್ರಿಸಿದ್ದನು.

ಅಮಾತ್ಯ ರಾಧಗುಪ್ತನ ನಂತರ ಅಮಾತ್ಯ ಪದವಿಗೇರಿದ "ಬಿಲ್ಲಾತಕ" ಎಂಬುವವನು ರಾಧಗುಪ್ತನಷ್ಟು ರಾಜ ತಂತ್ರ ಪ್ರವೀಣನಾಗಿರಲಿಲ್ಲ. ಮತ್ತೊಬ್ಬ ಮಂತ್ರಿ ಸಾಯುವಾಗಿ ಅಶೋಕನಿಂದ ಮಾತು ಪಡೆದಂತೆ ಧರ್ಮ ವಿರುದ್ದವಾದರೂ ವೃದ್ಯಾಪದಲ್ಲಿ ತರುಣಿಯನ್ನು ವಿವಾಹವಾದ ದೇವತೆಗಳ ಗುರು ತನ್ನ ಶಿಷ್ಯನಿಂದ ಅನ್ಯೆತಿಕವಾಗಿ ಪತ್ನಿಯಲ್ಲಿ ಮಗನನ್ನು ಪಡೆದಿದ್ದು," ಶ್ರೀ ರಾಮಾಯಣ ಕಾವ್ಯದಲ್ಲಿ ಮಹಾರಾಜ ವೃದ್ಧ ದಶರಥ ಮಕ್ಕಳಿಲ್ಲವೆಂದು ಚಲುವೆಯಾದ ತರುಣಿ ಕೈಕೆಯನ್ನು ವಿವಾಹವಾಗಿ ಆಕೆಯ ಮಾತಿನಂತೆ ಹಿರಿಯ ಮಗನನ್ನು

ಕಾಡಿಗೆ ಕಳುಹಿಸಿದ್ದು, ಅದೇ ವ್ಯಥೆಯಲ್ಲಿ ಮರಣ ಹೊಂದಿದ್ದು". ಮಹಾಭಾರತದಲ್ಲಿ "ಶಂತನು ಚಕ್ರವರ್ತಿಯು ತನ್ನ ಮಗನಿಗಿಂತ ಕಿರಿಯಳಾದ ಮತ್ಸಗಂಧಿ (ಸತ್ಯವತಿ)ಯನ್ನು ಮದುವೆಯಾಗಲು ಹಿರಿಯ ಪುತ್ರ ಬೀಷ್ಮನ ಜೀವನಕ್ಕೆ ಘಾತುಕವಾದುದು. ತನ್ಮೂಲಕ ಮಹಾಭಾರತ ಯುದ್ಧದ ದುರಂತಕ್ಕೆ ಕಾರಣನಾದುದು" ತಿಳಿಸಿದ್ದರೂ ಮಂತ್ರಿಗೆ ಕೊಟ್ಟ ಮಾತನ್ನು ಉಳಿಸಲು ತನ್ನ ಮಕ್ಕಳಿಗಿಂತ ಕಿರಿಯಳಾದ ಆತನ ಮಗಳು 'ತಿಷ್ಯರಕ್ಷಿತೆ' ಎಂಬುವವಳನ್ನು ತನಗಿಷ್ಟವಿಲ್ಲದಿದ್ದರೂ ವಿವಾಹವಾದನು. ಈಕೆ ಮಹತ್ವಾಕಾಂಕ್ಷೆಯ ಹೆಣ್ಣಾಗಿದ್ದಳು. ವಿಲಾಸಿಯೂ ದುರಾಚಾರದವಳೂ ಆಗಿದ್ದಳು.

○ **ಉರುಳಾದ ಔದರ್ಯ :**

ಅಶೋಕ 'ತಿಷ್ಯರಕ್ಷತೆ'ಯನ್ನು ಔದರ್ಯದಿಂದ ವಿವಾಹವಾಗಿ ತನ್ನ ಸಾಮ್ರಾಜ್ಯಕ್ಕೆ ಉರುಳಾಗಿಸಿಕೊಂಡನು. ಈಕೆಯ ಸಹೋದರ ಮಹತ್ವಾಕಾಂಕ್ಷಿಯಾಗಿದ್ದು ಕುಟಿಲ ಬುದ್ಧಿಯುಳ್ಳವನಾಗಿದ್ದು ಅಕ್ಕನೊಂದಿಗೆ ಅರಮನೆಯಲ್ಲಿದ್ದು ಅಶೋಕನ ವಿರುದ್ಧ ಪಿತೂರಿ ಮಾಡತೊಡಗಿದನು. ಇವರಿಬ್ಬರ ಕಿರಿಕಿರಿಗಳಲಿಂದ ಅಶೋಕ ನೊಂದು ಕಾಯಿಲೆ ಬಿದ್ದನು. ಸಾಮ್ರಾಜ್ಯಕ್ಕೊದಗುತ್ತಿರುವ ದುಃಸ್ಥಿತಿಗಾಗಿ ಕೊರಗಿದನು. ಅಶೋಕನ ಅಹಿಂಸಾ ತತ್ವಕ್ಕೆ ವಿರುದ್ಧವಾಗಿ 'ಲೆಷ್ಯರಕ್ಷಿತೆ'ಯ ಸಹೋದರನು, ಅರಮನೆಯ ಪಾಕ ಶಾಲೆಯಲ್ಲಿ ಮಾಂಸಾಹಾರವನ್ನು ಸಿದ್ದಮಾಡಿಸ ತೊಡಗಿದನು. ಇದು ಅಶೋಕನ ತತ್ವಗಳಿಗೆ ವಿರುದ್ಧವಾದುದಾದರೂ ಅಶೋಕನು ಅದನ್ನು ನಿಯಂತ್ರಿಸದಾದನು. ಇದು ಅಶೋಕನಿಗೆ ನುಂಗಲಾರದ ತುತ್ತಾಯಿತು. ತನ್ನ ವಿರುದ್ಧ ಅರಮನೆಯಲ್ಲಿಯೇ ಪಿತೂರಿ ನಡೆಯುವುದನ್ನು ಕಂಡು ಕಂಗಾಲಾದನು. ಇಷ್ಟೇ ಸಾಲದೆಂಬಂತೆ 'ತಿಷ್ಯರಕ್ಷಿತೆ' ಸುಂದರನಾಗಿದ್ದ ಮಲ ಮಗ ಕುನಾಲನ ಸಂಗವನ್ನು ಬಯಸಿದಲ್ಲದೆ ಒತ್ತಾಯಿಸಿದಳು, ಇದರಿಂದ ನೊಂದ 'ಕುನಾಲ'ನು ತಂದೆಯ ಅಪ್ಪಣೆ ಬೇಡಿ ತಕ್ಷಶಿಲೆಗೆ ತನ್ನ ಪತ್ನಿಯೊಂದಿಗೆ ಹೋಗಿ ಅರಮನೆಯಿಂದ ದೂರವಾದನು 'ಲೆಷ್ಯರಕ್ಷಿತೆ'ಯು ಸಹೋದರನೊಂದಿಗೆ ಭೌದ್ದ ಬಿಕ್ಷುಗಳಿಗೆ ಕಿರುಕುಳಕೊಡತೊಡಗಿದಳು. ವೈಧಿಕರನ್ನು (ಬ್ರಾಹ್ಮಣ ಪಂಡಿತರು) ಶ್ರಾವಕರನ್ನು (ಜೈನ ಮತದ ಗುರುಗಳು) ಭೌದ್ಧರ ವಿರುದ್ದ ಎತ್ತಿ ಕಟ್ಟಿದಳು . ಅಶೋಕನ ಮೂವರು ಪತ್ನಿಯರೂ ತಮ್ಮ ತಮ್ಮಲ್ಲಿ ಜಗಳವಾಡುತ್ತಿದ್ದರು. ಈ ಎಲ್ಲಾ ಘಟನೆಗಳಿಂದ ಆಡಳಿತದಲ್ಲಿ ಬಿಗಿ ತಪ್ಪಿತು. ಇದೆ ಕೊರಗಿನಲ್ಲಿ ಅಶೋಕನು ನಿಧನವಾದನು.

ಅಶೋಕನ ನಂತರ ಅಶೋಕನ ಮಗ 'ಕುನಾಲ'ನು ಪಟ್ಟಾಭಿಷಕ್ತನಾದನು. ಈತನಿಗೆ ಅರಮನೆಯಲ್ಲಿನ ಪಂಚನ್ನಾಗಲಿ 'ಲೆಷ್ಯರಕ್ಷಿತ'ಯ ಕಿರಿಕಿರಿಗಳನ್ನಾಗಲಿ ನಿಯಂತ್ರಿಸಲಾಗಲಿಲ್ಲ. ತನ್ನನ್ನು ಕೂಡಲು ನಿರಾಕರಿಸಿದ 'ಕುನಾಲ' ನ ಸುಂದರ ಸಕಣ್ಣುಗಳನ್ನು "ಲೆಷ್ಯರಕ್ಷಿತೆಯು ಕೀಳೆಸಿದಳು. ಕುರುಡನಾದ ಕುನಾಲನು ಇನ್ನೂ ಅಸಾಹಯಕನಾದನು. ಕಾಶ್ಮೀರದ ಪ್ರಾಂತ್ಯಧಿಕಾರಿಯಾಗಿದ್ದ 'ಜಲಾಕ'ನು ಸ್ವತಂತ್ರ್ಯವನ್ನು ಘೋಷಿಸಿಕೊಂಡನು. ಕುನಾಲನು ಹತ್ತುವರ್ಷ ರಾಜ್ಯವಾಳಿ ತನ್ನ ಮಗ 'ದಶರಥ'ನಿಗೆ ಪಟ್ಟ ಕಟ್ಟಿದನು. ದಶರಥನಿಗೆ ರಾಜ್ಯಾಡಳಿತದಲ್ಲಿ ಶಿಕ್ಷಣ, ತರಬೇತಿ ಸರಿಯಾಗಿ ದೊರೆಯದಿದ್ದುದರಿಂದ, ಅಶೋಕನ ದಕ್ಷತೆ, ಧೈರ್ಯ ಈತನಿಗೆಲ್ಲದಿದ್ದುರಿಂದ ಸಾಮಂತರಾಗಿದ್ದ ಗಾಂಧಾರ, ಕಳಿಂಗ ವಿಧರ್ಭ ಮತ್ತು ದಕ್ಷಿಣಾವರ್ತದ ವೈಶ್ಯ ರಾಜನಾದ ಶಾತವಾಹನರು ಸ್ವತಂತ್ರ್ಯ ರಾಜರುಗಳೆಂದು ತಮ್ಮನ್ನು ಘೋಷಿಸಿಕೊಂಡರು. ಮೌರ್ಯ ಸಾಮ್ರಾಜ್ಯದಿಂದ ಪ್ರತ್ಯೇಕವಾದರು. ದಶರಥನ ತರುವಾಯ ಅವನ ತಮ್ಮ 'ಸಾಂಪ್ರತಿ' ಅರಸನಾದನು. ಅವನ ನಂತರ 'ಶಾಲಿಯಕೆ'ರಾಜನಾದನು. ಇವರೆಲ್ಲ ಅಧ್ಯಕ್ಷರಾದುದರಿಂದ ಆಡಳಿತದಲ್ಲಿ ಬಿಗಿ ತಪ್ಪಿತು. ಸಾಮ್ರಾಜ್ಯದಲ್ಲೆಲ್ಲಾ ಅರಾಜಕತೆಯು ಮೂಡಿತು, ಸೇನಾಧಿಕಾರಿಗಳು ಮಂತ್ರಿಗಳೂ ಸ್ವೇಚ್ಛೆಯಿಂದ, ದೌರ್ಜನ್ಯದಿಂದ ಆಡಳಿತ ನೆಡೆಸಿದರು. ಬ್ರಹದ್ರಥನು ಮೌರ್ಯ ಸಾಮ್ರಾಜ್ಯದ ಕಡೆಯ ಅರಸ, ಜನ ದಂಗೆ ಏಳುವ ಹಂತಕ್ಕೆ ಬಂದು ಅಲ್ಲಲ್ಲಿ ಸಣ್ಣಪುಟ್ಟ ದಂಗೆಗಳಾಯಿತು. ಇಂತಹ ಸಂದರ್ಭದಲ್ಲಿ 'ಬ್ರಹದತ' ನನ್ನು ಅವನ ಸೇನಾನು 'ಪುಷ್ಯಮಿತ್ರ' ನೆಂಬ ವೈಶ್ಯನು ಕೊಂದು ಹಾಕಿ ತನ್ನದೇ ವಂಶಾಡಳಿತವನ್ನು ಪ್ರಾರಂಭಿಸಿದನು. ಭಾರತದ ವಿಶಾಲ ಪ್ರದೇಶವನ್ನು ಆಳಿದಕ್ಷತೆ, ಶಾಂತಿ, ಸಹನೆಗಳ ಸಾಮ್ರಾಜ್ಯವನ್ನು ಸಂಪದ್ಭರಿತಗೊಳಿಸಿದ್ದ ಮೌರ್ಯ ಸಾಮ್ರಾಜ್ಯ ಕಡೆಯಲ್ಲಿ ಪಿತೂರಿಗಾರರ ಅದಕ್ಷ ಅರಸರ ಕೈ ಸೇರಿ ಪತನಗೊಂಡಿತು. ಭಾರತದ ವಾಯುವ್ಯ ಭಾಗದಲ್ಲಿ ನಲೆಯೂರಿದ್ದ ಮೌರ್ಯರ ಸಾಮಂತರಾಗಿದ್ದ ಯವನರು (ವಿದೇಶಿಯರು) ಅಂದರೆ ಬ್ಯಾಪ್ಟಿಯಾದ ಗ್ರೀಕರು. ಮಧ್ಯಏಷ್ಯಾದ ಶಕರು (ಸಿಧಿಯನ್ನರು) ಪಾರ್ಥಿಯನ್ನರು ತಾವು ಸ್ವತಂತ್ರ್ಯರೆಂದು ಘೋಷಿಸಿಕೊಂಡರು.

○ **ಶುಂಗ ವಂಶ :**

ಕ್ರಿ.ಪೂ. 188 ರಿಂದ 70 ಈ ವಂಶದ ಮೊದಲ ದೊರೆ ಪುಷ್ಪ ಮಿತ್ರನು 36 ವರ್ಷಗಳ ಕಾಲ ರಾಜ್ಯವನ್ನಾಳಿದನಾದರೂ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಲಾಗಲಿಲ್ಲ. ತನ್ನ ರಾಜ್ಯವನ್ನುಳಿಸಿಕೊಳ್ಳುವುದಕ್ಕೆ ಹೆಣಗುತ್ತಿದ್ದನು. ತನ್ನ ರಾಜ್ಯದ ಮೇಲೆ ದಾಳಿಯಿಟ್ಟಯವರನ್ನು ಹಿಮ್ಮೆಟ್ಟಿಸಿದನು. ಇವನ ಸೇನೆಯ ಮುಂದಾಲತ್ವವನ್ನು ಇವನ ಮೊಮ್ಮಗ 'ವಸುಮಿತ್ರ' ನಿರ್ವಹಿಸಿ

ವೈರಿ ಸೇನೆಗಳನ್ನು ಸೋಲಿಸಿದನು. ಪುಷ್ಪಮಿತ್ರನು 'ಅಶ್ವಮೇಧ'ಯಾಗ ಮಾಡಿ ತಾನು ಹಿರಿಯ ರಾಜ, ಚಕ್ರವರ್ತಿ ಎಮದು ಭ್ರಮಿಸಿದನು. ವೈಧಿಕರಿಗೆ (ಬ್ರಾಹ್ಮಣರಿಗೆ) ಧಾನ ಧರ್ಮಗಳನ್ನು ನೀಡಿ ಸಂತೃಪ್ತಿ ಪಡಿಸಿದನು. ಇವನ ನಂತರ ಇವನ ಮಗ 'ಅಗ್ನಿಮಿತ್ರ'ನು ಅರಸನಾದನು. ನಂತರ 'ಅಗ್ನಿಮಿತ್ರ' ರ ಮಕ್ಕಳಾದ ಜೇಷ್ಠ, ಸುಮಿತ್ರರು ರಾಜ್ಯವಾಳಿದರು. ಈ ವಂಶದ ದುರ್ಬಲ ದೊರೆ 'ದೇವಭೂತಿ'ಯನ್ನು ಈತನ ಮಂತ್ರಿ ವೈಶ್ಯ ವಾಸುದೇವನು ಕೊಂಡು ಕಣ್ವವಂಶವನ್ನು ಸ್ಥಾಪಿಸಿದನು. ಆಳುವ ಅರಸರಲ್ಲಿ ದಕ್ಷತೆ, ಧೈರ್ಯ ಸಾಹಸಿಗಳಿಲ್ಲದಿದ್ದಲ್ಲಿ ಸಾಮ್ರಾಜ್ಯದ ಆಧಾರ ಸ್ತಂಭಗಳಾದ ಸೇನಾನಿ, ಮಂತ್ರಿಗಳು, ಅರಸರ ನೆಂಟರೇ ಕಂಟಕರಾಗಿ ಸಾಮ್ರಾಜ್ಯದ ಅವನತಿಗೆ ಕಾರಣರಾಗುತ್ತಾರೆ.

○ **ಕಣವಂಶ :**

ಕ್ರಿ.ಪೂ. 70 ರಿಂದ 30 ಈ ವಂಶದ ಮೊದಲ ದೊರೆ ವಾಸುದೇವ ಈತ ಹತ್ತು ವರ್ಷಗಳು ರಾಜ್ಯವಾಳಿದನು. ನಂತರ ಈತನ ಮಕ್ಕಳಾದ ಭೂಮಿಮಿತ್ರ ನಾರಾಯಣ ಮತ್ತು ಬ್ರಾಹ್ಮಣ ಪತ್ನಿಯಲ್ಲಿ ಜನಿಸಿದ ಶುಶರ್ಮನೆಂಬುವರು ತಲಾ ಹತ್ತು ವರ್ಷ ಸರದಿಯಂತೆ ರಾಜ್ಯವಾಳಿದರು. ಅಸಮರ್ಥರಾದ ಇವರಿಗೆ ದೇಶಾಭಿಮಾನವಿರಲಿಲ್ಲ. ಅಧಿಕಾರ ಲಾಲಸೆಯೊಂದೇ ಇದ್ದ ಇವರಲ್ಲಿ ಸಹಮತವಿಲ್ಲದೆ ಪರಸ್ಪರ ಕಚ್ಚಾಡುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ದಕ್ಷಿಣಾಪಥೇಶ್ವರನೆಂದು ಖ್ಯಾತಿಯಾಗಿದ್ದ ವೈಶ್ಯ ದೊರೆಗಳಾದ ಶಾತವಾಹನರ ಶ್ರೀ ಮುಖನೆಂಬುವವನು ಸುಶರ್ಮನನ್ನು ಸೋಲಿಸಿ ಓಡಿಸಿದನು. ಕಣ್ವವಂಶದ ಆಡಳಿತವನ್ನು ಅಂತ್ಯಗೊಳಿಸಿದನು.

ಆಧುನಿಕ ಕಾಲದಲ್ಲಿ ಇತಿಹಾಸ ಬರೆದ ಬ್ರಾಹ್ಮಣ ಪಂಡಿತರು ಚಂದ್ರಗುಪ್ತಮೌರ್ಯನನ್ನು ಶೂದು ಕ್ಷತ್ರಿಯನೆಂದು ವರ್ಣಿಸಿ, ಅವನು ವೈಶ್ಯನೆಂಬುದನ್ನು ಮರೆಮಾಚಿದರು. ಈ ಶಾಸನದಿಂದ ಚಂದ್ರಗುಪ್ತಮೌರ್ಯನನ್ನು "ವೈಶ್ಯ" ನೆಂಬುದನ್ನು ದೃಢಪಡಿಸಿತು. ಈ ಶಾಸನವು 'ರುದ್ರಧಾಮನ ಗೆರಿನಾರ್ ಪ್ರಶಸ್ತಿ ಶಾಸನ' ವೆಂದು ಹೆಸರಾಗಿದೆ.

ಮಹಾರಾಷ್ಟ್ರದ ಕ್ಷತ್ರಪರು, ಕಾಥೇವಾಡ, (ಬ್ರೋಚ್ ಅಜ್ಮೀರಗಳನ್ನು ಕೆಲವು ವರ್ಷ ಆಳಿದರು. ಇವರನ್ನು (ವೈಶ್ಯ) ಶಾತವಾಹನತ ಗೌತಮಿ ಪುತ್ರ ಶಾತಕರ್ಣಿ ಎಂಬುವವನು. ಸೋಲಿಸಿ ಈ ಪ್ರದೇಶಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡರು.

## 2.4 ವೈಶ್ಯ ಸಮುದಾಯದ ಪೂರ್ವ ಪರಿಚಯ :

ವೈಶ್ಯರು ಸಚಿಡೂರು ತಾಲ್ಲೂಕಿನ ನಿವಾಸಿಗಳಾಗಿದ್ದಾರೆ. ವೈಶ್ಯರು ತಮ್ಮ ಮೂಲ ವೃತ್ತಿ ಹೆಚ್ಚಾಗಿ ವ್ಯಾಪಾರವೇಯಾಗಿದೆ ಕೆಲವರು ವ್ಯವಸಾಯ ಮಾಡುತ್ತಾರೆ ಇನ್ನೂ ಕೆಲವರು ಮೈನಿಂಗ ವ್ಯಾಪಾರ ಮಾಡುತ್ತಾರೆ. ಹಾಗೂ ಸ್ವಲ್ಪ ಜನ ರಾಜಕೀಯ ರಂಗದಲ್ಲೂ ಕಾರ್ಯವನ್ನು ನಿರ್ವಹಿಸುತ್ತಾರೆ ಮತ್ತು ಸರ್ಕಾರಿ ಉದ್ಯೋಗದಲ್ಲೂ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ, ಹೆಚ್ಚಾಗಿ ವೈಶ್ಯ ಜನಾಂಗದವರು ತಮ್ಮ ಜೀವನವನ್ನು ವ್ಯಾಪಾರದಿಂದಲೇ ಸಾಗಿಸುತ್ತಾ ಬಂದಿದ್ದಾರೆ ಸುಮಾರು ಶತಮಾನಗಳು ಅಂದರೆ ರಾಜಮನೆತನಗಳ ಕಾಲದಿಂದಲೂ ವೈಶ್ಯೆ ಜನಾಂಗದ ವೃತ್ತಿ ವ್ಯಾಪಾರವೇ ಆಗಿದೆ ಎಂದು ಮೂಲ ಪುರುಷರು ಹೇಳಿಕೆ ನೀಡಿದ್ದಾರೆ. ಸಂಡೂರು ತಾಲ್ಲೂಕಿನ್ಲಲಿ ವೈಶ್ಯರು ಸುಮಾರು 15 ಸಾವಿರದಷ್ಟು ಇದ್ದಾರೆ ಈ ಪ್ರದೇಶದಲ್ಲಿ ವ್ಯವಸಾಯ ಮಾಡಲು ಹೆಚ್ಚಾಗಿ ಭೂಮಿ ಇಲ್ಲದ ಕಾರಣ ಹೆಚ್ಚಾಗಿ ತಮ್ಮ ವೃತ್ತಿಯಾದ ವ್ಯಾಪಾರವನ್ನೇ ಹೆಚ್ಚಿನ ಮಟ್ಟದಲ್ಲಿ ಮಾಡುವುದು ಕಂಡು ಬಂದಿದೆ. ಇಲ್ಲಿನ ವೈಶ್ಯರು ಆರ್ಥಿಕ, ಸಾಮಾಜಿಕ,ರಾಜಕೀಯವಾಗಿ ತಕ್ಕಮಟ್ಟಿಗೆ ನಿರ್ವಹಿಸುತ್ತಿದ್ದಾರೆ ಇತರೆ ಜನಾಂಗಗಳಿಗಿಂತ ಭಿನ್ನವಾಗಿ ಇರುವುದನ್ನು ಕಾಣಬಹುದು ಭಾರತ ಸ್ವಾತಂತ್ರ್ಯ ಬಂದು ಇಲ್ಲಿಯವರೆಗೂ ವೈಶ್ಯರ ಜೀವನ ಕ್ರಮದಲ್ಲಿ ಯಾವುದೇ ರೀತಿಯ ಬದಲಾವಣೆಗಳೂ ಆಗಿಲ್ಲ.

## 2.5 ವೈಶ್ಯ ಸಮುದಾಯದ ಕುಟುಂಬ ಪದ್ದತಿ :

ವೈಶ್ಯರಲ್ಲಿ ವಿಭಕ್ತ ಕುಟುಂಬ ಮತ್ತು ಅವಿಭಕ್ತ ಕುಟುಂಬ ಎಂಬ ಎರಡು ಪ್ರಬೇಧಗಳಿದ್ದರೂ, ವಿಭಕ್ತ ಕುಟುಂಬಗಳೇ ಹೆಚ್ಚು ಅವಿಭಕ್ತ ಕುಟುಂಬದಲ್ಲಿ ಅಣ್ಣನಾದವನೇ ಮನೆಯ ಯಜಮಾನನಾಗಿರುತ್ತಾನೆ. ಮದುವೆ, ಹಬ್ಬ ಇತ್ಯಾದಿ ಆಚರಣೆಗಳು ಇವನ ಒಪ್ಪಿಗೆ ಮೇರೆಗೆ ನೆಡೆಯುತ್ತವೆ. ಮನೆಯಲ್ಲಿ ನೆಡೆಯುವ ಒಳಜಗಳಗಳು ಇವನ ಮೂಲಕ ಪರಿಹಾರಗೊಳ್ಳುತ್ತವೆ.

ವಿಭಕ್ತ ಕುಟುಂಬದಲ್ಲಿ ಪತಿ, ಪತ್ನಿ ಮತ್ತು ಮಕ್ಕಳು ಸೇರಿರುತ್ತಾರೆ. ಇಲ್ಲಿ ತಂದೆ ಪ್ರಧಾನ ವ್ಯಕ್ತಿಯಾಗಿರುತ್ತಾನೆ. ವೃದ್ಧರಿಗೆ ಮನೆಯ ಅಧಿಕಾರವಿರುವುದಿಲ್ಲ. ತನ್ನ ಮಕ್ಕಳು ಮದುವೆಯಾಗುವವರೆಗೆ ಅವನ ಜೊತೆ ಇದ್ದು ನಂತರ ಅವರಿಗೆ ಬಂದ ಭಾಗದಲ್ಲಿ ಸುಖವಾಗಿ ಬದುಕುತ್ತಾರೆ. ಈ ಕಾರಣದಿಂದ ಗಂಡು ಮಕ್ಕಳಿಗೆ ಮದುವೆ ಪ್ರಧಾನ ಘಟ್ಟ ಈ ಕುಟುಂಬದಲ್ಲಿ

ತಂದೆ ಪ್ರಧಾನ ರಕ್ಷಕನಾಗಿ ಕೆಲಸ ನಿರ್ವಹಿಸುತ್ತಾನೆ. ಇವರಲ್ಲಿ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆ ಇದ್ದು, ಮದುವೆಯಲ್ಲಿ ಗೋತ್ರವನ್ನು ಕುಟುಂಬದ ತಂದೆಯಿಂದಲೇ ಗುರುತಿಸಿಕೊಳ್ಳುತ್ತಾರೆ. ಮಕ್ಕಳ ಮೇಲೆ ತಂದೆಗೆ ಹಿಡಿತವಿರುತ್ತದೆ. ಆಸ್ತಿಯ ಹಕ್ಕು ತಂದೆಯಿಂದ ಮಗನಿಗೆ ವರ್ಗಾವಣೆಯಾಗುತ್ತದೆ. ಇವರಲ್ಲಿ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಇರುವುದಿಲ್ಲ.

ವೈಶ್ಯ ಸಮುದಾಯದಲ್ಲಿ ತಂದೆಯಕಡೆ ರಕ್ತ ಸಂಬಂಧಗಳಿಗೆ ಹೆಚ್ಚಿನ ಮಹತ್ವ ಇರುತ್ತದೆ. ತಂದೆಯ ತಂದೆ, ತಾಯಿ, ಅಜ್ಜ, ಅಜ್ಜಿ ರೆಂದು ಕರೆಸಿಕೊಳ್ಳುತ್ತಾರೆ. ಮೊಮ್ಮಕ್ಕಳಿಗೆ ಅಜ್ಜ, ಅಜ್ಜಿ ಯರೆಂದರೆ ಬಹಳ ಪ್ರೀತಿ ಹಾಗೆಯೇ ಅಜ್ಜ ಅಜ್ಜಿಯರಿಗೂ

ಮೊಮ್ಮಕ್ಕಳನ್ನು ವಿಶೇಷ ಮಮತೆಯಿಂದ ಬೆಳಸುತ್ತಾರೆ. ಕೆಲವು ವಿಶೇಷ ಹಬ್ಬದ ದಿನಗಳಲ್ಲಿ ಹೊಸ ಬಟ್ಟೆ ಮತ್ತು ಹಣವನ್ನು ಕೊಡುತ್ತಾರೆ.

ವೈಶ್ಯ ಸಮುದಾಯದವರು ಶ್ರೀ ವಾಸವಿ ಕನ್ಯಕಾಪರಮೇಶ್ವರಿ, ಊರಮ್ಮ, ವೆಂಕಟೇಶ್ವರ, ಆಂಜಿನೇಯ ದೇವ ದೇವತೆಗಳಿಗೆ ಹರಕೆಯನ್ನು ಒಪ್ಪಿಸುತ್ತಾರೆ. ತಮ್ಮ ತಮ್ಮಲ್ಲಿ ಜಗಳಗಳುಂಟಾದಾಗ ಅ ಸಮುದಾಯದ ಮುಖ್ಯಸ್ಥರಿಂದ ನ್ಯಾಯ ಬಗೆಹರಿಸಿಕೊಳ್ಳುತ್ತಾರೆ. ಬೇರೆ ಜಾತಿಯ ಜನರೊಂದಿಗೆ ಜಗಳಗಳಾದರೆ ಊರ ಮುಖಂಡರಿಂದ ನ್ಯಾಯ ಬಗೆಹರಿಸಿಕೊಳ್ಳುತ್ತಾರೆ.

# ಅಧ್ಯಾಯ –೩

# ಮದುವೆ : ಬದುಕಿನ ಅವಿಭಾಜ್ಯ ಅಂಗ

# ಅಧ್ಯಾಯ – 3

## ಮದುವೆ : ಬದುಕಿನ ಅವಿಭಾಜ್ಯ ಅಂಗ

ಮದುವೆ ಕುಟುಂಬಕ್ಕೆ ಪೂರಕವಾದ ಸಂಸ್ಥೆಯಾಗಿದೆ. ವಿವಾಹವು ಇಂದು ನಿನ್ನೆಯದಲ್ಲ, ವಿವಾಹದ ವಿಧಿವಿಧಾನಗಳು, ರೀತಿ ನೀತಿಗಳು ಹಾಗೂ ನಿರ್ಬಂಧ ಮತ್ತು ಪ್ರಕಾರಗಳು ಸಮೂಹದಿಂದ ಸಮೂಹಕ್ಕೆ ಭಿನ್ನವಾಗುತ್ತವೆ. ವಿವಾಹದ ಉದ್ದೇಶ ಮತ್ತು ಕಾರ್ಯವಿಧಾನಗಳ ಬಗ್ಗೆಯೂ ಬೇರೆ ಬೇರೆ ಸಮೂಹಗಳಲ್ಲಿ ಬೇರೆ ಬೇರೆ ವಿಚಾರಗಳೇ ಇವೆ. ಸಂಪ್ರದಾಯಗಳು ಒಂದು ಸಮುದಾಯಕ್ಕಿಂತ ಮತ್ತೊಂದು ಸಮುದಾಯಕ್ಕೆ ಭಿನ್ನವಾಗಿವೆ. ವಿವಾಹ ವ್ಯವಸ್ಥೆ ಇಲ್ಲದ ಸಮಾಜವೇ ಇಲ್ಲವೆನ್ನಬಹುದು. ವಿವಾಹ ಸಂಸ್ಥೆಯು ಸಾರ್ವತ್ರಿಕವಾದುದು ಅಂದರೆ ಈ ಸಂಸ್ಥೆಯು ಒಂದಲ್ಲೊಂದು ರೂಪದಲ್ಲಿ ಎಲ್ಲ ಸಮಾಜಗಳಲ್ಲಿಯೂ ಇರುತ್ತದೆ. ಎಲ್ಲಾ ಕಾಲಕ್ಕೂ ಇರುವುದನ್ನು ಕಾಣುತ್ತೇವೆ. ಕಾಲ ಪರಿಸ್ಥಿತಿಗಳಿಗೆ ಅನುಗುಣವಾಗಿ ವಿವಾಹದ ಪದ್ದತಿಗಳಲ್ಲಿ ಅನೇಕ ವ್ಯತ್ಯಾಸಗಳು ಕಂಡು ಬಂದರೂ ಅದು ಮಾನವನ ಜೀವನದೊಂದಿಗೆ ಒಂದಾಗಿ ಬೆಳೆದು ಬಂದಿದೆ. ಈ ವಿವಾಹವು ಧಾರ್ಮಿಕ ಸಂಸ್ಥೆಗಿಂತ ಪುರಾತನವಾದುದೆಂದು ಮನೋತಜ್ಞರು ಅಭಿಪ್ರಾಯಪಡುತ್ತಾರೆ. ಮಾನವನಿಗೆ ಜನನ, ಬಾಲ್ಯ, ಯೌವ್ವನ ಮುಪ್ಪು, ಸಾವುಗಳು ಸಹಜವಾದಂತೆ ವಿವಾಹವೂ ಕೂಡ ಸಹಜವೆಂದು ಸಮಾಜ ಭಾವಿಸಿದೆ. ವಿವಾಹ ಸಂಸ್ಥೆಯನ್ನು ಕಡೆಗಣಿಸಿ ಬಾಳಿದವರ ಹಾಗೂ ಬಾಳುತ್ತಿರುವವರ ಸಂಖ್ಯೆ ಅತಿ ವಿರಳ. ವಿವಾಹವು ಇದೊಂದು ಸಾಮಾಜಿಕ ಸಂಸ್ಥೆ ಗಂಡು ಹೆಣ್ಣು ಕೂಡಿ ಕುಟುಂಬವೊಂದನ್ನು ಕಟ್ಟಲು ವಿವಾಹ ಅತ್ಯವಶ್ಯಕ.

ವಿವಾಹದ ಪ್ರಾಚೀನತೆಯ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಿಲ್ಲ. ಮದುವೆಯ ಕಲ್ಪನೆಯಾಗಲಿ, ವ್ಯವಸ್ಥೆಯಾಗಲಿ ಇರದ ಜನಸಮೂಹವೇ ಬಹುಶಃ ಈ ಹೊತ್ತು ಪ್ರಪಂಚದಲ್ಲಿ ಇರಲಾರದು ಮನುಷ್ಯ ಭೂಮಿಯಲ್ಲಿ ಕಾಣಿಸಿಕೊಳ್ಳುವ ಮೊದಲೇ ಕೆಲವು ವಾನರ ವರ್ಗಗಳಲ್ಲಿ ಅದಕ್ಕೂ ಮೊದಲು ಕೆಲವು ಪ್ರಾಣಿಗಳಲ್ಲಿ ಮತ್ತು ಪಕ್ಷಿಗಳಲ್ಲಿ ಇಂತಹ ಒಂದು ವ್ಯವಸ್ಥೆಯನ್ನು ಗುರುತಿಸುವುದು ಸಾಧ್ಯವೆಮದು ಸಮಾಜಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ.

ಒಂದು ಗಂಡು ಪ್ರಾಣಿಯೇ, ಪಕ್ಷಿಯೇ ಯಾವುದಾದರೊಂದು ಅವಧಿಯಲ್ಲಿ ಸಂಪ್ರದಾಯಗಳ ಮೂಲಕ ಹೆಣ್ಣಿನೊಂದಿಗೆ ಕೂಡಿಕೊಳ್ಳುವುದು ಕೂಡಿಕೊಂಡ ಮೇಲೆ ಜನಿಸಿದ ಮರಿಗಳ

ಜವಾಬ್ದಾರಿಯನ್ನು ಒಟ್ಟಿಗೆ ನಿಭಾಯಿಸುವುದು ಗಂಡು ಮತ್ತು ಹೆಣ್ಣು ತಮ್ಮ ಮಕ್ಕಳೊಂದಿಗೆ ಒಟ್ಟು ಸೇರಿ ಒಂದು ಕುಟುಂಬದಂತೆ ಜೀವನ ಸಾಧಿಸುವುದು ಇದು ಪ್ರಕೃತಿಯ ಸಹಜವಾದ ಸಂತಾನೋತ್ಪತ್ತಿಗಾಗಿ ನಡೆಯುವ ಪ್ರಕ್ರಿಯೆಯಷ್ಟೆ, ವಿವಾಹವೊಂದು ಅನಿವಾರ್ಯ ಸಾಮಾಜಿಕ ಸಂಸ್ಥೆಯಾಗಿ ಹುಟ್ಟಿಕೊಂಡರೂ ನಂತರದ ದಿನಗಳಲ್ಲಿ ವಿವಾಹ ಸಂಸ್ಥೆ ಧಾರ್ಮಿಕ ಆಚರಣೆಯನ್ನುವಂತೆ ಭಾವಿತವಾಯಿತು, ಇಂದು ಬಹುತೇಕ ಸಮಾಜಗಳಲ್ಲಿ ವಿವಾಹವು ಒಂದು ಧಾರ್ಮಿಕ ಸಾಂಪ್ರಾದಾಯಿಕ ಸಂಸ್ಕಾರವಾಗಿದೆ. ಮಾನವನು ಪ್ರಾಣಿಗಳಂತೆ ಲೈಗಿಂಕ ಪ್ರಚೋಧನೆಯನ್ನು ಹೊಂದಿದರೂ ಅದನ್ನು ಈಡೇರಿಸಿಕೊಳ್ಳುವಾಗ ಪ್ರಾಣಿವರ್ಗದಂತೆ ಎಲ್ಲಿ ಬೇಕಾದರೂ ಅಲ್ಲಿ ಪಡೆದುಕೊಳ್ಳಲು ಸಾಧ್ಯವಿಲ್ಲ, ಕಾರಣ ಮಾನವ ಸಮಾಜ ಇದನ್ನು ವೈಯಕ್ತಿಕ ಅಥವಾ ಜೈವಿಕವೆಂದು ಮಾತ್ರ ಭಾವಿಸದೆ ಸಾಮಾಜಿಕ ಹಾಗೂ ನೈತಿಕ ವಿಷಯವೆಂದು ಪರಿಗಣಿಸಿದೆ. ಈ ಕಾರಣದಿಂದ ಎಲ್ಲಾ ಮಾನವ ಸಮುದಾಯವೂ ನಿರ್ಧಿಷ್ಟ ಸಂಗಾತಿಗಳ ನಡುವೆ ಉನ್ನತ ಪ್ರಕಾರದ ಹಾಗು ಸ್ಥಿರವಾದ ಬಂಧನವೊಂದನ್ನು ಇಷ್ಟಪಡುತ್ತದೆ. ಇದನ್ನೇ 'ಮದುವೆ' ಎಂದು ಕರೆದು ಗಂಡು ಹೆಣ್ಣುಗಳನ್ನು ಒಂದು ವ್ಯವಸ್ಥಿತ ಕುಟುಂಬ ಜೀವನಕ್ಕೆ ಒಳಪಡಿಸುವುದು.

ಅತ್ಯಂತ ಪ್ರಾಚೀನ ಮಾನವನ ಕಾಲದಲ್ಲಿ ಲೈಂಗಿಕ ಸ್ವಚ್ಛಂದತೆ ಪ್ರಚಲಿತವಿದ್ದು ಯಾರು ಯಾರನ್ನಾದರೂ ಸೇರಬಹುದಾಗಿತ್ತು. ತಾಯಿ ಮಗನೊಡನೆ ತಂದೆ ಮಗಳೊಡನೆ ಕೆಲವು ಸಾರಿ ಅಣ್ಣ ತಂಗಿರೊಡನೆ ಲೈಂಗಿಕ ಸಂಯೋಗ ನೆಡೆದು ಮಕ್ಕಳಾಗುತ್ತಿದ್ದವು. ಆದರೆ ಹಾಗೆ ಹುಟ್ಟಿದ ಮಕ್ಕಳು ಶಾರೀರಿಕವಾಗಿ ಮತ್ತು ಮಾನಸಿಕವಾಗಿ ದುರ್ಬಲವಾಗಿರುತ್ತಿದ್ದವು. ಹೀಗೆ ಹುಟ್ಟಿದ ಮಕ್ಕಳಿಗೆ ಗರ್ಭಿಣಿಯರಿಗೆ ಸರಿಯಾದ ರಕ್ಷಣೆ ಸಿಕ್ಕುತ್ತಿರಲಿಲ್ಲ. ಈ ತೊಂದರೆಗಳ ಪರಿಹಾರಕ್ಕಾಗಿ ವಿವಾಹ ಪದ್ಧತಿ ಜಾರಿಗೆ ಬಂದಿತೆಂದು ಮಾನವ ಶಾಸ್ತ್ರಜ್ಞರು ಹೇಳಿದ್ದಾರೆ.

ಮದುವೆಯು ಮಾನವನ ಬದುಕಿನಲ್ಲಿ ಒಂದು ಮಹತ್ವದ ಘಟ್ಟ ಅಪರಿಚಿತವಾದ ಗಂಡು ಹೆಣ್ಣನ್ನು ಒಂದುಗೂಡಿಸಿ ಜೀವನ ಸಂಗಾತಿಗಳನ್ನಾಗಿ ಮಾಡುವ ವಿಶಿಷ್ಟ ಸಂದರ್ಭ ಬದುಕಿನಲ್ಲಿ ಒಮ್ಮೆ ಮಾತ್ರ ನಡೆಯುವ ಘಟನೆ-ಬದುಕಿಗೆ ಭದ್ರತೆಯನ್ನು, ಜವಾಬ್ದಾರಿಯನ್ನು ತಂದುಕೊಡುತ್ತದೆ. ಜೀವನದಲ್ಲಿ ಉತ್ಸಾಹ ಆನಂದ ಹೆಚ್ಚುವಂತೆ ಮಾಡಿ ಗಂಡು ಹೆಣ್ಣುಗಳನ್ನು ಜೀವನದ ರಸಯಾನಕ್ಕೆ ತೊಡಗಿಸುವ ಒಂದು ಮಂಗಳಕರ ಪ್ರಸಂಗವಾಗುತ್ತದೆ. ಎರಡು ಕುಟುಂಬಗಳ ನಡುವೆ ಹೊಸ ಸಂಬಂಧವನ್ನು ಬೆಸೆಯುತ್ತದೆ. ಎರಡು ಕುಟುಂಬಗಳು ಎರಡು ಊರುಗಳಲ್ಲಿ

ಸೇರಿಕೊಂಡಿದ್ದರೆ ಆ ಎರಡು ಊರುಗಳ ನಡುವೆ ಸಾಮರಸ್ಯ ಕಂಡು ಬರುತ್ತದೆ. ಒಟ್ಟಿನಲ್ಲಿ ಮದುವೆ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಬಹು ಮಹತ್ವದ ಪಾತ್ರವಹಿಸುತ್ತಿದೆ. ಮದುವೆಯ ಉದ್ದೇಶ ಪ್ರತಿ ಮಾನವ ಸಮಾಜಗಳಲ್ಲೂ ಒಂದೇ ಆದರೆ ಅದನ್ನು ನಡೆಸುವ ರೀತಿ ಮಾತ್ರ ಬೇರೆ ಬೇರೆ ಸಮಾಜ ನಲೆಗೊಂಡ ಪರಿಸರ ಬದುಕಿನ ಸ್ಥಿತಿಗತಿ ಧರ್ಮ ನಂಬಿಕೆ ಇವೇ ಮುಂತಾದ ಅಂಶಗಳಿಗನುಗುಣವಾಗಿ ಮದುವೆ ಪದ್ಧತಿ ರೂಪ ಪಡೆದಿದೆ. ಕಾಲಕಾಲಕ್ಕೆ ಬದುಕಿನ ಇನ್ನಿತರ ಮಹತ್ವದ ಘಟ್ಟಗಳ ಅನುಸರಣೆಯಲ್ಲಿ ಅನೇಕ ವ್ಯತ್ಯಾಸಗಳುಂಟಾದಂತೆ ಮದುವೆ ಪದ್ಧತಿಯಲ್ಲೂ ಹಲವು ವ್ಯತ್ಯಾಸಗಳು ಸಾಧಿತವಾಗಿವೆ. ನಿರ್ಧಿಷ್ಟ ಸಮಾಜವೊಂದರಲ್ಲಿ ಜರಗುವ ಮದುವೆ ಆಚರಣೆಯ ಅಧ್ಯಯನವೆಂದರೆ, ಆ ಸಮಾಜದ ಒಂದು ಸಾಂಸ್ಕೃತಿಕ ಕ್ರಿಯೆ. ಇಡೀ ಸಮಾಜ ಅಥವಾ ಆ ಸಮಾಜದ ಬಹುಪಾಲು ಸಮೂಹ ಆ ಕ್ರಿಯೆಯಲ್ಲಿ ಭಾಗಿಯಾಗುವುದನ್ನು ಕಾಣಬಹುದು. ಮದುವೆ ಬಂಧನಕ್ಕೆ ಸಂಡೂರು ಸುತ್ತಲಿನ ವೈಶ್ಯರಲ್ಲಿ ವಿಶೇಷ ಪ್ರಾಶಸ್ತ್ಯವಿದೆ. ಇದೊಂದು ದೇವರ ಕಾರ್ಯ ಎಂಬ ಕಲ್ಪನೆ ಇದೆ. ಈ ಕಾರಣದಿಂದ ವಿವಾಹದ ಕಾರ್ಯಕಲಾಪಗಳೆಲ್ಲ ಅನೇಕ ಶಾಸ್ತ್ರ. ವಿಧಿ ವಿಧಾನಗಳನ್ನು ತಳಕು ಹಾಕಿ ಕೊಂಡಿದ್ದಾರೆ. ಮದುವೆಯ ಆಗುಹೋಗುಗಳು ಕೇವಲ ಗಂಡು ಹೆಣ್ಣುಗಳಿಗೆ ಮಾತ್ರ ಸೀಮಿತ ವಾದುದಲ್ಲಿ ಇಡೀ ಸಮಾಜಕ್ಕೆ ಸಂಬಂಧಿಸಿದವು ಸಾಮಾಜಿಕ ಸುವ್ಯವಸ್ಥೆ ಮತ್ತು ಸಾಮಾಜಿಕ ಭದ್ರತೆ ಮದುವೆಯನ್ನು ಅವಲಂಬಿಸಿದೆ ಎಂಬ ತಿಳುವಳಿಕೆ ಇವರಲ್ಲಿ ಬೇರೊರಿದೆ.

ವೈಶ್ಯರು ಉದ್ಯೋಗ ವ್ಯಾಪಾರವಾಗಿದೆ. ಈಗ ಈ ವ್ಯಾಪಾರದ ಜೊತೆಗೆ ಕೆಲವರು ರಾಜಕೀಯ, ಸಿನಿಮಾ ರಂಗದಲ್ಲಿ ಮತ್ತೆ ಸರ್ಕಾರಿ ಉದ್ಯೋಗಗಳಲ್ಲಿ ಕಾರ್ಯ ನಿರ್ವಹಿಸುತ್ತಾರೆ. ಆದರೂ ಇವರ ಮುಖ್ಯ ಕಸುಬು ವ್ಯಾಪಾರವೇ ಆಗಿದೆ. ಈ ಕೆಲಸಗಳನ್ನು ಸುಗಮವಾಗಿ ನಿರ್ವಹಿಸುವ ಸಲುವಾಗಿ ಮದುವೆಗೆ ವಿಶೇಷ ಮಹತ್ವ ನೀಡಿದ್ದಾರೆ. ಈ ಸಮಾಜ ಬ್ರಹ್ಮಚಾರ್ಯ ಜೀವನವನ್ನು ಪುರಸ್ಕರಿಸುವುದಿಲ್ಲ. ವಯಸ್ಕ ಅವಿವಾಹಿತರ ಮುಖ ನೋಡುವುದು ಒಳ್ಳೆಯದಲ್ಲ ಎಂದು ನಂಬುತ್ತಾರೆ. ಅಲ್ಲದೆ ಮದುವೆ ಇಲ್ಲದ ಬಾಳು ಬರಡು ಮತ್ತು ಗೋಳು ಎಂಬ ನಂಬಿಕೆ ಇದೆ. ಅಷ್ಟೇ ಅಲ್ಲ, ಅವಿವಾಹಿತನಾದ ವ್ಯಕ್ತಿ ಮರಣವಪ್ಪಿದರೆ ಆತನಿಗೆ ಮುಕ್ತಿ ದೊರಕುವುದಿಲ್ಲ ಎಂದೂ ನಂಬುತ್ತಾರೆ.

ಮೋಕ್ಷದ ಮಾರ್ಗದಲ್ಲಿ ಸಾಗಬೇಕಾದರೆ ಮದುವೆಯಾಗಿ ಒಂದಾದರೂ ಗಂಡು ಮಕ್ಕಳನ್ನು ಪಡೆಯಬೇಕು. ಪುತ್ರ ಸಂತಾನವಿಲ್ಲದ ವ್ಯಕ್ತಿ ತಾನು ಪಿತೃಗಳಿಂದ ಪಿತೃ ಋಣವನ್ನು ತೀರಿಸದೆ

ಋಣಸ್ಥನಾಗಿಯೆ ಉಳಿದು ಗತಿಸಿದ ನಂತರ ಮೋಕ್ಷ ಪ್ರಾಪ್ತವಾಗದೆ ದುಷ್ಕರ್ಮಿಯಾಗಿ ನರಕಕ್ಕೆ ಹೋಗಬೇಕಾಗುತ್ತದೆಂದೂ ನಂಬುವರು (ಅಂಬಳಿಕೆ ಹಿರಿಯಣ್ಣ) ಸೂಕ್ಷ್ಮವಾಗಿ ಇವರ ಈಗಿನ ಮದುವೆ ಸಂಪ್ರದಾಯವನ್ನು ಪರಿಶೀಲಿಸಿ ನೋಡಿದರೆ ಹಿಂದೆ ಇವರಲ್ಲಿ ಅನೇಕ ಬಗೆಯ ಪದ್ಧತಿಗಳು ಜಾರಿಯಲ್ಲಿದ್ದವೆಂದು ತಿಳಿದು ಬರುತ್ತದೆ. ಅನೇಕ ವಕ್ತೃಗಳು, ಹೀಗೆ ಕೆಲವು ದಶಕಗಳ ಹಿಂದಿನವರೆಗೂ ಬೇರೆ ಬೇರೆ ಮದುವೆ ಪದ್ಧತಿಗಳು ರೂಢಿಯಲ್ಲಿದ್ದವೆಂಬುದನ್ನು ಖಚಿತಪಡಿಸಿದ್ದಾರೆ. ಅವುಗಳನ್ನು ಸ್ಥೂಲವಾಗಿ ವಿವೇಚಿಸಲಾಗಿದೆ.

**1. <u>ಅಳಿಯ ಸಂತಾನ ಪದ್ಧತಿ</u> :**

ಈ ವಿವಾಹ ಪದ್ಧತಿಯ ಪ್ರಕಾರ ಹೆಣ್ಣನ್ನು ಗಂಡನ ಮನೆಗೆ ಕಳಿಸುವುದಿಲ್ಲ ಬದಲಾಗಿ ಗಂಡನ್ನೇ ತರುವ ಕ್ರಮ. ಒಂದು ಇಲ್ಲವೆ ಒಂದಕ್ಕಿಂತ ಹೆಣ್ಣು ಮಕ್ಕಳನ್ನು ಹೊಂದಿದ್ದ ತಂದೆ ತಾಯಿಗಳು ಈ ಬಗೆಯ ಮದುವೆ ಪದ್ಧತಿಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಿದ್ದರು. ಆದರೆ ಅವರು ತಮ್ಮ ಅನುಕೂಲಕ್ಕೆ ತಕ್ಕಂತೆ ಹಿರಿಯ ಇಲ್ಲವೆ ಕಿರಿಯ ಮಗಳಿಗೆ ಇಂಥ ಮದುವೆ ಮಾಡುತ್ತಿದ್ದರು. ಉಳಿದವರನ್ನು ಹೊರಕ್ಕೆ ಕೊಡುತ್ತಿದ್ದರು. ಹುಡುಗ ಸೋದರಿಕೆ ಸಂಬಂಧದವನು ಅಥವಾ ದೂದ ಸಂಬಂಧಿಯೋ ಆಗಿರುತಿದ್ದ, ಗುರುತು ಪರಿಚಯ ಬಳಕೆಯಿದ್ದ ವ್ಯಕ್ತಿ ಮಾತ್ರ ಮುಂದೆ ಆ ಮನೆಯ ಯಜಮಾನನಾಗಿ ಯಶಸ್ಸು ಹೊಂದಲು ಸಾಧ್ಯವೆಂದು ತಿಳುವಳಿಕೆ ಇರುವುದರಿಂದಲೇ ಈ ಪದ್ಧತಿ ಬಳಕೆಗೆ ಬರಲು ಕಾರಣವಾಗಿದೆ.

**2. <u>ನಾದಿನಿ ವಿವಾಹ ಪದ್ಧತಿ</u> :**

ಹೆಂಡತಿ ಬಂಜೆಯಾಗಿದ್ದರೆ ಇಲ್ಲವೆ ಸಾವಿಗೀಡಾದರೆ ಹೆಂಡತಿಯ ತಂಗಿಯನ್ನು ಮದುವೆಯಾಗುವುದು. ಹಿಂದೆ ಇದು ಕಡ್ಡಾಯವೆಂಬಂತೆ ನಡೆದು ಬರುತಿತ್ತು. ಈಗ ಹುಡುಗನಿಗೆ ಹುಡುಗಿ ಒಪ್ಪಿಗೆಯಾದರೆ ಮಾತ್ರ ಮಾಡಿಕೊಳ್ಳಬಹುದು ಇಲ್ಲವಾದರೆ ಹೊಸ ಸಂಬಂಧವನ್ನು ಬೆಳಿಸಬಹುದು. ಈ ಪದ್ಧತಿ ಇಂದಿಗೂ ಅಲ್ಲಲ್ಲಿ ರೂಢಿಯಲ್ಲಿದೆ.

**3. <u>ಬಹುಪತ್ನಿತ್ವ</u> :**

ಒಬ್ಬಳಿಗಿಂತ ಹೆಚ್ಚು ಸ್ತ್ರೀಯರನ್ನು ಮದುವೆಯಾಗುವಿಕೆ ಈ ಪದ್ಧತಿ ಮೊನ್ನೆ ಮೊನ್ನೆಯವರೆಗೂ ರೂಢಿಯಲ್ಲಿತ್ತು. ಒಬ್ಬನೇ ಪುರುಷ ನಾಲ್ಕು ಐದು ಮದುವೆ ಮಾಡಿಕೊಳ್ಳುತ್ತಿದ್ದ ಉದಾಹರಣೆಗಳು

ಕೆಲವಿದೆ. ಇದಕ್ಕೆ ಕಾರಣಗಳು ಇವೆ. ಹಿಂದೆ ಬಾಣಂತನ ಬಹಳ ದೀರ್ಘಕಾಲ ನಡೆಯುತ್ತಿತ್ತು. ಆ ಅವಧಿಯಲ್ಲಿ ಗಂಡನು ಕಾಮತೃಷಿಯನ್ನು ಇಂಗಿಸಿಕೊಳ್ಳಲು ಬೇರೊಬ್ಬಳನ್ನು ಸೇರುತ್ತಿದ್ದ ಇದರಿಂದ ಸಾಮಾಜಿಕ ಅಭದ್ರತೆಯುಂಟಾಗಿ ತೊಂದರೆಯಾಗಿರುವುದರಿಂದ ಅದಕ್ಕೆ ಪರಿಹಾರವಾಗಿ ಒಬ್ಬಳು ಬಾಣಂತನಕ್ಕೆ ಹೋದಾಗ ಇನ್ನೊಬ್ಬಳೊಂದಿಗೆ ಜೀವನ ನಡೆಸಲು ಈ ವಿವಾಹ ಪದ್ಧತಿಯನ್ನು ರೂಢಿಗೆ ತಂದಿರಬೇಕು. ಹೆಚ್ಚು ಹೆಂಡತಿಯರನ್ನು ಹೊಂದಿರುವುದು ತಮ್ಮ ಪ್ರತಿಷ್ಟಿಯ ವಿಷಯವು ಆಗಿತ್ತು.

4. **ಬಾಲ್ಯ ವಿವಾಹ** :

ಪ್ರಾಚೀನ ಕಾಲದಲ್ಲ ಈ ಪದ್ದತಿ ಹೆಚ್ಚು ಪ್ರಚಲಿತವಿತ್ತು ಬೇರೆ ಬೇರೆ ಕಾರಣಗಳಿಗಾಗಿ ಮಕ್ಕಳಿಗೆ ಅಪ್ರಾಪ್ತ ವಯಸ್ಸಿನಲ್ಲೆ ಮದುವೆ ಜರುಗಿಸುತ್ತಿದ್ದರು. ತಂದೆ ತಾಯಿಗಳ ಮುಪ್ಪಿನ ಕಾಲವೋ ರೋಗ ರುಜನಿಗಳ ಕಾರಣವೊ ಹೀಗೆ ಎನೋ ಒಂದು ಕಾರಣವಿರುತ್ತಿತ್ತು. ಹೆಣ್ಣು ದೊಡ್ಡವಳಾಗುವುದಕ್ಕಿಂತ ಮೊದಲೇ ಮದುವೆ ಮಾಡಿಕೊಟ್ಟರೆ ತಂದೆ ತಾಯಿಗಳಿಗೆ ಒಳ್ಳೇಯದು ಎಂಬ ನಂಬಿಕೆ ಪ್ರಬಲ ಕಾರಣ. ಗಂಡು ಮಕ್ಕಳಿಲ್ಲದ ಮನೆಯಲ್ಲ ಈ ಪದ್ದತಿ ಹೆಚ್ಚು ಪ್ರಚಲಿತವಿತ್ತು. ಹುಡುಗ ಮತ್ತು ಹುಡುಗಿ ಇಬ್ಬರು ಅಪ್ರಾಪ್ತರಾಗುತ್ತಿದ್ದರು. ಇಂಥ ಮದುವೆಯನ್ನು 'ಕನ್ನೆಧಾರೆ' ಎಂದು ಇದನ್ನು ಎಂಟು ಹತ್ತು ವರ್ಷದವರೆಗೆ ಮಾಡುತ್ತಿದ್ದರು. ಆದರೆ ಈ ಬಾಲ್ಯವಿವಾಹ ವ್ಯವಸ್ಥೆ ಇಂದು ಕಣ್ಮರೆಯಾಗುತ್ತಾ ಬರುತ್ತದೆ.

5. **ತೊಟ್ಟಿಲ ಮದುವೆ** :

ಇದೂ ಬಾಲ್ಯ ವಿವಾಹವೇ ಆದರೆ ಗಂಡು ಹೆಣ್ಣುಗಳಿಗೆ ಎಂಟು ಹತ್ತು ವರ್ಷಗಳಾದ ಮೇಲೆ ನಡೆಸುವ ವಿವಾಹವಲ್ಲ. ಹೆಣ್ಣು ಹುಟ್ಟಿ, ಹನ್ನೊಂದು ರಾತ್ರಿ ಕಳೆದು ನಾಮಕರಣದ ದಿನ ಈ ಮಗುವನ್ನು ಸೊಸೆಯಾಗಿ ಬಯಸುವ ಸೋದರತ್ತ ತನ್ನ ಮಗನ ಹಸ್ತದಿಂದ ಕೊರಳಿಗೆ ಸರವನ್ನೊ, ಕಡಗವನ್ನು ಹಾಕಿದರೆ ತೊಟ್ಟಲ ಮದುವೆ ಆದಂತೆ ಮುಂದೆ ಅನುಕೂಲವಾದಾಗ ಮದುವೆ ಮಾಡಿಕೊಳ್ಳುತ್ತಿದ್ದರು. ಇದು ಸಂಪೂರ್ಣ ಸೋದರತ್ತೆ ಮತ್ತು ಸೋದರಮಾವನ ಹಕ್ಕಾಗಿತ್ತು. ಹೆಣ್ಣು ಗಂಡುಗಳು ಸಂಖ್ಯೆ ಅತಿ ಕಡಿಮೆಯಿದ್ದ ಕಾಲದಲ್ಲಿ ಈ ಪದ್ದತಿ ತುಂಬ ಜನಪ್ರಿಯವಾಗಿತ್ತು.

6. **ಕೂತು ಮದುವೆ :**

ಇದು ಬಹಳ ಸರಳ ವಿವಾಹ ಪದ್ದತಿ, ಸಾಮಾನ್ಯ ಪದ್ದತಿ ಎಂದರೆ ಹುಡುಗಿಯ ಜೊತೆಯಲ್ಲಿ ಮದುವೆಯಾಗುವುದು. ಆದರೆ ಇಲ್ಲಿ ಹುಡುಗನ ಮನೆಯಲ್ಲಿ ಮದುವೆ ನಡೆಯುತ್ತದೆ. ಹುಡುಗಿ ಕುಟುಂಬದವರು ತೀರಾ ಬಡವರಾಗಿದ್ದರೆ, ಇಲ್ಲವೆ ಹುಡುಗ ಕುಂಟನೊ ಕುರುಡನೊ ಆಗಿದ್ದರೆ ಮಾತ್ರ 'ಕೂತು ಮದುವೆ' ನಡೆಸುತ್ತಿದ್ದರು. ಹೆಣ್ಣು ತನ್ನ ಮನೆಯಿಂದ ಹೊರಟು ಗಂಡಿನವರು ಕೊಟ್ಟ 'ಬಿಡದಿ' ಮನೆಯಲ್ಲಿ ಅಲಂಕರಿಸಿಕೊಂಡು ಮದುವೆ ಮಾಡಿಕೊಳ್ಳುತ್ತಿದ್ದಳು.

7. **ವಿನಿಮಯ ವಿವಾಹ :**

ಹಿಂದಿನ ಕಾಲದಲ್ಲಿ 'ತೆರೆ' ಪದ್ದತಿಯಿಂದ ಮದುವೆಯೇ ಕಷ್ಟವಾಗುತಿತ್ತು. ಈ ಪದ್ದತಿಯನ್ನು ತಪ್ಪಿಸುವುದಕ್ಕಾಗಿ ವಿನಿಮಯ ವಿವಾಹವನ್ನು ಜಾರಿಗೆ ತಂದಿರಬೇಕು. ' ಹೆಣ್ಣಿಗೆ ಹೆಣ್ಣು ಎಂಬ ಹೆಸರಿನಲ್ಲಿ ಜನಪ್ರಿಯವಾಗಿದ್ದ ಪದ್ದತಿ ಕೊಟ್ಟು ತರುವ ಪದ್ದತಿ ಇದು. ಈ ವಿವಾಹ ಪದ್ದತಿ ಈಗಲೂ ಕೆಲವು ಕಡೆ ಪ್ರಚಲಿತವಿದೆ.

ವೈಶ್ಯರಲ್ಲಿ ಹಲವು ಬಗೆಯ ಮದುವೆ ಪದ್ದತಿಗಳು ಹಿಂದೆ ರೂಢಿಯಲ್ಲಿ ಇದ್ದವಾದರೂ 'ಏಕಪತ್ನಿತ್ವ'ಕ್ಕೆ ಹೆಚ್ಚು ಗೌರವವಿತ್ತು. ಹಾಗು ಹೆಚ್ಚು ಪ್ರಚಲಿತವಿತ್ತು. ಈ ಪದ್ದತಿಯಲ್ಲಿ ಪ್ರೀತಿ, ವಿಶ್ವಾಸ, ಸಹಬಾಳ್ವೆ, ಲೈಂಗಿಕ ತೃಪ್ತಿ, ಹೊಣೆಗಾರಿಕೆಗಳಿರುವುದರಿಂದ ಅಲ್ಲದೆ ಹಿಂದೆ ಇವರಲ್ಲಿ 'ಒಳ ಬಾಂದವ್ಯ ಪದ್ದತಿ' ಜನಪ್ರಿಯವಾಗಿತ್ತು, ನಾಗರಿಕ ಸಂಪರ್ಕ ಬೆಳದಂತೆ ಮೊದಲಿನ ಪದ್ದತಿ ಮರೆಯಾಗಿ ಹೊರ ಬಾಂಧವ್ಯ. ಬೆಳಕಿಗೆ ಬಂದಿದೆ. ತಮ್ಮ ಕುಲ ಮನೆತನದ ಹೊರಗಿನ ಯಾವ ಗಂಡನೊಡನೆಯೂ ವೈವಾಹಿಕ ಸಂಬಂಧ ನೆಡೆಸುವುದು ರೂಢಿಯಾಗಿತ್ತು. ತಮ್ಮ ಬದುಕಿನಲ್ಲಿ ಬರಬಹುದಾದ ತೊಂದರೆಗಳನ್ನು ಹೋಗಲಾಡಿಸಿಕೊಳ್ಳಲು ಹೊರಗಿನವರ ನೆರವನ್ನು ಪಡೆಯುವ ಉದ್ದೇಶದಿಂದಲೂ ಈ ವಿವಾಹ ಪದ್ದತಿಗೆ ಹೆಚ್ಚಿನ ಮಹತ್ವ ದೊರಕಿತು. ಈ ಕಾರಣದಿಂದಾಗಿ ಒಳ ಬಾಂಧವ್ಯ ಪದ್ದತಿಗಿಂತ ಹೊರ ಬಾಂಧವ್ಯವೇ ಹೆಚ್ಚು ಜನಪ್ರೀಯತೆ ಗಳಿಸಲು ಸಾಧ್ಯವಾಯಿತು.

ತಮ್ಮ ಮಗಳಿಗೆ ಒಂದು ವರವನ್ನು ನೋಡಿ ಒಪ್ಪಿಗೆ ನೀಡಿ ಮದುವೆಯ ಏರ್ಪಾಡು ಮಾಡುತ್ತಿದ್ದರು. ಇಲ್ಲಿ ಹುಡುಗಿಯ ಒಪ್ಪಿಗೆಯನ್ನು ಕೇಳುತ್ತಿರಲಿಲ್ಲ. ಆದರೆ ಈಗ ಇಂಥ ಮದುವೆ ಇಲ್ಲವೇ ಇಲ್ಲ. ಎಲ್ಲವೂ ಹೆಣ್ಣು ಕೇಳುವವರ ಕೊಡುವವರ ಮತ್ತು ಪುರೋಹಿತರ ಕೈಯಲ್ಲಿದೆ.

ಇವರು ನಡೆಸುವ 'ಶಾಸ್ತ್ರೋಕ್ತ' ರೀತಿಯ ವಿವಾಹ ಪದ್ಧತಿಯಲ್ಲಿ ಸಂಪ್ರದಾಯಗಳು, ವಿಧಿಗಳು ವಿಶಿಷ್ಟವಾಗಿವೆ. ಪರಂಪರಾನುಗತವಾಗಿ ಉಳಿದುಕೊಂಡು ಬಂದ ಮದುವೆಯ ವೈಶಿಷ್ಟಗಳು ಕಾಣಬಹುದು. ಈ ಪದ್ಧತಿಯಲ್ಲಿ ಮಾತ್ರ, ಹೆಣ್ಣು ನೋಡುವುದರಿಂದ ಆರಂಭಿಸಿ ಅವಳನ್ನು ಮನೆದುಂಬಿಸಿಕೊಳ್ಳುವವರೆಗೆ ವಿವಿಧ ನಡಾವಳಿಗಳು ಈ ಜನರ ಸಂಸ್ಕೃತಿಯ ಸತಿಯನ್ನು ಸುರುಳಿ ಬಿಚ್ಚಿಸುತ್ತವೆ.

ಮನುಧರ್ಮ ಶಾಸ್ತ್ರಕಾರರು ವಿವಾಹವನ್ನು ಬ್ರಾಹ್ಮ, ದೈವ, ಆರ್ಷ, ಪ್ರಜಾಪತ್ಯ, ಅಸುರ, ಗಂಧರ್ವ, ರಾಕ್ಷಸ ಮತ್ತು ಪೈಶಾಚ ಎಂದು ಎಂಟು ವಿಧಗಳಾಗಿ ವಿಭಾಗಿಸಿದ್ದಾರೆ.

1. ಉತ್ತಮ ರೀತಿಯಿಂದ ಬ್ರಹ್ಮಚರ್ಯಾ ಶ್ರಮವನ್ನು ಪಾಲಿಸಿ, ವೇದಾಧ್ಯೆಯನ ಸಂಪನ್ನನೂ, ಧಾರ್ಮಿಕನು ಸುಗುಣಿಯೂ ಆದ ವರನಿಗೆ ಕನ್ಯೆಯನ್ನು ಕೊಟ್ಟು ಮದುವೆ ಮಾಡುವುದಕ್ಕೆ " ಬ್ರಾಹ್ಮವಿವಾಹ"ವೆಂದು ಹೆಸರು.
2. ದೊಡ್ಡ ಯಜ್ಞದಲ್ಲಿ ಋತ್ವಿಜನಾಗಿಯೂ, ತರುಣನಾಗಿಯೂ, ವಿಧ್ಯಾ ಸಂಪನ್ನನಾಗಿಯೂ ಬಂದ ವರನಿಗೆ ವಸ್ತ್ರಾಭರಣಗಳಿಂದ ಭೂಷಿತಳಾದ ಕನ್ಯೆಯನ್ನು ಕೊಟ್ಟು ಲಗ್ನ ಮಾಡಿಕೊಡುವುದಕ್ಕೆ "ದೈವ" ವಿವಾಹವೆಂತಲೂ.
3. ವರನ ಕಡೆಯಿಂದ ಒಂದು ಗೋವನ್ನಾಗಲೀ, ಒಂದು ಜತೆ ವೃಷಭಗಳನ್ನಾಗಲೀ ತೆಗೆದುಕೊಂಡು ಧರ್ಮ ಪೂರ್ವಕವಾಗಿ ಲಗ್ನ ಮಾಡಿಕೊಡುವುದು 'ಆರ್ಷ' ವಿವಾಹವೆಂತಲೂ.
4. ಯಜ್ಞ ಶಾಲೆಯಲ್ಲಿ ವಧೂವರರನ್ನು ಸಂಬೋಧಿಸಿ ನೀವಿಬ್ಬರು ಅನ್ಯೋನ್ಯ ಪ್ರೇಮದಿಂದ ವರ್ತಿಸುತ್ತ ಧರ್ಮವನ್ನಾಚರಿಸಿ ಎಂದು ಅವರಿಗೆ ಬೋಧಿಸಿ, ಅವರಿಂದ ಪ್ರತಿಜ್ಞೆ ಮಾಡಿಸಿ ವಿಧಿ ಪೂರ್ವಕವಾಗಿ ಲಗ್ನ ಮಾಡಿಕೊಡುವುದಕ್ಕೆ "ಪ್ರಜಾ ಪತ್ಯ" ವಿವಾಹವೆಂತಲೂ.
5. ಅಳಿಯನ ಕಡೆಯಿಂದ ಶುಲ್ಕವನ್ನು ತೆಗೆದುಕೊಂಡು ಕನ್ಯೆಯನ್ನು ಮದುವೆ ಮಾಡಿಕೊಡುವುದಕ್ಕೆ "ಅಸುರ" ವಿವಾಹವೆಂತಲೂ.
6. ವಧೂವರರು ಅನ್ಯೋನ್ಯವಾಗಿ ಒಪ್ಪಿ ಲಗ್ನ ಮಾಡಿಕೊಳ್ಳುವುದಕ್ಕೆ ಗಾಂಧರ್ವ ವಿವಾಹವೆಂತಲೂ.
7. ವಧುವಿನ ಕಡೆಯವರನ್ನು ಅತ್ಯಂತವಾಗಿ ಹಿಂಸಿಸಿ, ಭಯಗ್ರಸ್ಥಳಾದ ಕನ್ಯೆಯನ್ನು ಬಲತ್ಕಾರವಾಗಿ ಅಪಹರಿಸಿಕೊಂಡು ಹೋಗುವುದಕ್ಕೆ "ರಾಕ್ಷಸ" ವಿವಾಹವೆಂತಲೂ.

8. ನಿದ್ರೆ ಮಾಡುತ್ತಿರುವವಳನ್ನಾಗಲೀ, ಮದ್ಯಪಾನದಿಂದ ಮೈ ಮರೆತಿರುವವಳನ್ನಾಗಲೀ ಹುಚ್ಚಿಯನ್ನಾಗಲೀ ಆದ ಕನ್ಯೆಯೊಡನೆ ಕೂಡುವುದಕ್ಕೆ "ಪೈಶಾಚ" ವಿವಾಹವೆಂತಲೂ ಹೆಸರು

ಇವು ಮನು ಧರ್ಮನ ವಿವಾಹದ ಪ್ರಕಾರಗಳು.

# ಅಧ್ಯಾಯ – ೪

## ಮದುವೆ : ಕ್ರಮ ಮತ್ತು ವಿಶ್ಲೇಷಣೆ

೪.೧ ಪೂರ್ವಭಾವಿ ಆಚರಣೆಗಳು
೪.೨ ಮದುವೆಯ ಮೊದಲ ದಿನ
೪.೩ ಮದುವೆಯ ದಿನ
೪.೪ ಮದುವೆಯ ನಂತರ ಆಚಾರಣೆ
೪.೫ ನಂಬಿಕೆ ಮತ್ತು ಶಕುನಗಳು

# ಅಧ್ಯಾಯ - 4

## ಮದುವೆ : ಕ್ರಮ ಮತ್ತು ವಿಶ್ಲೇಷಣೆ

ವೈಶ್ಯರು ಬದುಕಿನಲ್ಲಿ ಮದುವೆ ಬಹು ಮುಖ್ಯ ಘಟ್ಟ ಬಹಳಷ್ಟು ಜನಾಂಗಗಳಲ್ಲೂ ಕೂಡಾ ಅದು ಮನೆತನದ ಗೌರವವನ್ನು ಪ್ರತಿನಿಧಿಸುತ್ತದೆ ಎಂದು ಅವರ ನಂಬಿಕೆ. ಕುಟುಂಬ ಮತ್ತು ಸಮಾಜ ವ್ಯಾಪ್ತಿಯನ್ನು ನಿರ್ಧರಿಸುವ ಪ್ರಮುಖ ಮಾನದಂಡವಾಗಿ 'ಮದುವೆ' ಅವರಲ್ಲಿ ಅನುಷ್ಠಾನಕ್ಕೆ ಬರುತ್ತದೆ.

ವೈಶ್ಯರ ಮದುವೆ ಮೊದಲ ಹಂತ ಆರಂಭವಾಗುವುದು 'ಗೋತ್ರ' ದ ಆಯ್ಕೆಯಲ್ಲಿ ವಧು ವರರ ಗೋತ್ರಗಳ ಜೋಡಣೆ ಮೂಲಕ ಆರಂಭವಾಗುವುದು. ವೈಶ್ಯರಲ್ಲಿ ಸುಮಾರು 714 ಗೋತ್ರಗಳಿರುವುದು ತಿಳಿದು ಬಂದರೂ ಈಗ ಕೇವಲ 102 ಗೋತ್ರದವರು ಮಾತ್ರ ಇದ್ದಾರೆ ಎಂದು ತಿಳಿದು ಬಂದಿದೆ. ಅದರಲ್ಲಿ ಕೆಲವು ಗೋತ್ರಗಳನ್ನು ನೋಡಬಹುದು.

1. ಘನಪಶಿಲ ಇದು ವೈಶ್ಯರ ಆರಾಧ್ಯ ದೇವತೆ ವಾಸವಿ ಮನೆತನದ ಗೋತ್ರವಾಗಿದೆ.
2. ಪೆಂಡ್ಲಿಕುಲ
3. ಮಿಥುನ ಕುಲ
4. ಮೌಂಚು ಕುಲ
5. ಮುನಗು ಶಿಲ
6. ದೇವಿ ಚಟ್ಲ
7. ವಸಂತ ಕುಲ
8. ಶೇಕಬಳ್ಳಿ
9. ಚನಶೆಟ್ಲೆ
10. ಪೀಳೀ ಚಟ್ಲೆ
11. ಬಲೀ ಚಟ್ಲೆ
12. ಚಿನ ಚಟ್ಲೆ
13. ತೋಟ ಕುಲ

14. ತೊಲಿಯಾಟ ಕುಲ
15. ಜನ ಕುಲ
16. ಮುಪ್ಪಾಲ ಕುಲ
17. ಚಿಂತ ಕುಲ
18. ಚಿಲಕಲ ಕುಲ
19. ಚಂಡಂಡಿ ಕುಲ
20. ನಾಗಪಿಳ್ಳಿ ಕುಲ
21. ಅನಂತ ಕುಲ
22. ದಂಡ ಕುಲ

ವರನು ತನ್ನ ಗೋತ್ರವನ್ನು ಬಿಟ್ಟು ತನಗೆ ಸರಿ ಹೊಂದುವ ಗೋತ್ರವೊಂದನ್ನು ಆಯ್ದುಕೊಳ್ಳಬೇಕಾಗುತ್ತದೆ. ಇಂಥ ವರನ ತಂದೆ ಮತ್ತು ತಾಯಿಯವರ ಗೋತ್ರವನ್ನು ಲಕ್ಷಕ್ಕೆ ತೆಗೆದುಕೊಳ್ಳುತ್ತಾರೆ. ಆಸ್ತಿಯ ಒಡೆತನ ಹಾಗೆ ಗೋತ್ರವು ತಂದೆಯಿಂದ ಮಗನಿಗೆ ಇಳಿದು ಬರುವದರಿಂದ, ತಂದೆಯ ಗೋತ್ರದ ಹೆಣ್ಣನ್ನು ಮದುವೆಯಾಗುವಂತಿಲ್ಲ. ಆದರೆ ತಂದೆಯ ತಂಗಿಯನ್ನು ಬೇರೆ ಕಡೆಗೆ ಕೊಟ್ಟಿರುವುದರಿಂದ ಆಕೆಯಲ್ಲಿ ಜನಿಸಿದ ಹೆಣ್ಣನ್ನು ಮತ್ತೆ ಮನೆಗೆ ಮದುವೆಯ ಮೂಲಕ ತರಬಹುದು, ಮಗಳನ್ನು ಕೊಡಬಹುದು. ಅದೇ ಪ್ರಕಾರ ಮಗಳನ್ನು ತಾಯಿಯ ಸಹೋದರನೇ ಮದುವೆ ಮಾಡಿಕೊಳ್ಳಬಹುದು. ಇಲ್ಲವೇ ಸೋದರ ಮಾವನ ಮಗನಾದರೂ ಮದುವೆ ಆಗಬಹುದು. ಆದರೆ ಒಂದೇ ಗೋತ್ರಗಳಲ್ಲಿ ಮದುವೆಯಾಗುವಂತಿಲ್ಲ. ಇದು ಮೂಲ ನಿಷೇಧ ಒಂದೇ ಗೋತ್ರದವರೆಲ್ಲ ಸಹೋದರ ಸಹೋದರಿಯರ ಸಂಬಂಧವಿರುತ್ತದೆ.

ಸಂಡೂರು ತಾಲೂಕು ವೈಶ್ಯರಲ್ಲಿ ಸುಮಾರು 20-21 ಗೋತ್ರದವರು ಮಾತ್ರ ಇವೆ ಎಂದು ಕ್ಷೇತ್ರ ಕಾರ್ಯದಿಂದ ದೊರಕಿದೆ ಕರ್ನಾಟಕ ವೈಶ್ಯರಲ್ಲಿ 102 ಗೋತ್ರಗಳಿವೆ.

**ಹೆಣ್ಣಿನ ಆಯ್ಕೆ :**

ಒಳ ಬಾಂದವ್ಯವಿದ್ದ ಸಂದರ್ಭದಲ್ಲಿ ಹಳೆಯ ಸಂಬಂಧದಲ್ಲಿ ಹೆಣ್ಣನ್ನು ತರುವುದು ರೂಢಿಯಲ್ಲಿತ್ತು. ಆದರೆ ಎಲ್ಲರಿಗೂ ಹಳೆಯ ಸಂಬಂಧಗಳು ದೊರಕುವುದು ಅಸಾಧ್ಯವಿರುವುದರಿಂದ ಇಂದು ಹೆಣ್ಣಿನ ಆಯ್ಕೆಯನ್ನು ಈ ರೀತಿ ಮಾಡುತ್ತಾರೆ. ವಧುವಿನ ಅಥವಾ ವರರ ಜಾತಕಗಳನ್ನು (ಕುಂಡ್ಲಿಗಳನ್ನು) ಜಾಹೀರಾತುಗಳ ಮೂಲಕ ಜಾತಕಗಳನ್ನು ಹುಡುಕಿ ಆಯಾಯ ವಧುವಿಗೆ ಯಾವ ಜಾತಕ ಕೂಡಿಬರುತ್ತದೆ. ಎಂಬುದನ್ನು ಪುರೋಹಿತರ ಮೂಲಕ ತಿಳಿದು ಸರಿಹೊಂದುವ ಜಾತಕಗಳನ್ನು ತೆಗೆದುಕೊಂಡು ಆಯ ವಧುವಿನ ಮನೆಗೆ ಪೋನ್ ಮೂಲಕ ಅಥವಾ ಅಂಚೆ ಮೂಲಕ ಇಲ್ಲವೇ ಮಧ್ಯವರ್ತಿಗಳೊಂದಿಗೆ ಅವರ ಮನೆಗಳಿಗೆ ವಿಷಯ ತಿಳಿಸಿ. ಆ ವಧುವಿನ ಮನೆಗೆ ಹೆಣ್ಣನ್ನು ನೋಡುವ ಕಾರ್ಯ ಆರಂಭಿಸುತ್ತಾರೆ. ಆ ವಧುವಿಗೆ ಸಂಬಂಧಪಟ್ಟ ವಿವರಗಳು ವಧುವಿನ ಜಾತಕದಲ್ಲೇ ಕಂಡು ಬರುತ್ತದೆ. ವಧುವಿನ ವಯಸ್ಸು, ವಿಧ್ಯಾರ್ಹತೆ, ಬಣ್ಣ, ತಂದೆ, ತಾಯಿ, ಅಕ್ಕ, ತಮ್ಮ, ಅಣ್ಣ, ತಂಗಿ ಈ ಎಲ್ಲಾ ವಿಷಯವನ್ನು ತಿಳಿದು ಹಿರಿಯರು ಮಧ್ಯವರ್ತಿಯ ಮೂಲಕ ಹೆಣ್ಣು ನೋಡಲು ಬರುವುದಾಗಿ ತಿಳಿಸುತ್ತಾರೆ. ಹೆಣ್ಣಿನ ಮನೆಯವರು ಒಪ್ಪಿಗೆ ನೀಡುತ್ತಾರೆ.

ಒಂದು ಶುಭದಿನ ಗಂಡಿನ ಕಡೆಯಿಂದ ಐದು ಆರು ಜನರು ಹಾದಿ ನಿಮಿತ್ತ ನೋಡಿಕೊಂಡು ಹೆಣ್ಣಿನ ಮನೆಗೆ ಬರುತ್ತಾರೆ. ಈ ಸಂದರ್ಭದಲ್ಲಿ ಹೆಣ್ಣಿನ ಮನೆಯವರು ಬಹಳ ಮಾರ್ಯಾದೆಯಿಂದ ಬರಮಾಡಿಕೊಂಡು ಕೈ ಕಾಲುಗಳನ್ನು ತೊಳೆದುಕೊಳ್ಳಲು ನೀರು ಕೊಟ್ಟ ನಂತರ ಒರೆಸಿಕೊಳ್ಳಲು ಬಟ್ಟೆಯನ್ನು ಕೊಡುತ್ತಾರೆ. ಬಂದ ಅತಿಥಿಗಳನ್ನು ಚಾಪೆಯ ಮೇಲೋ ಕುರ್ಚಿಗಳ ಮೇಲೋ ಕೂರಿಸುತ್ತಾರೆ. ಹೆಣ್ಣು ಅಲಂಕೃತಗಳಾಗಿ ತುಂಬಿದ ಪಾನೀಯ ಲೋಟಗಳನ್ನು ಹಿಡಿದುಕೊಂಡು ಬಂದು ಅತಿಥಿಗಳ ಮುಂದಿಡುತ್ತಾಳೆ ಗಂಡಿನವರು ಸೂಕ್ಷ್ಮವಾಗಿ ಹೆಣ್ಣಿನ ಪರೀಕ್ಷೆಗೆ ತೋಡಗುತ್ತಾರೆ. ಹೆಣ್ಣಿನ ಸೌಂದರ್ಯ, ಅವಳ ನಡೆ ನುಡಿ ಮತ್ತು ಧ್ವನಿ ಇವುಗಳನ್ನು ಸೂಕ್ಷ್ಮವಾಗಿ ಪರೀಕ್ಷೆ ಮಾಡುತ್ತಾರೆ. ಅನಂತರ ಈ ಎಲ್ಲಾ ಗುಣಗಳು ವರನಿಗೆ ಇಷ್ಟವಾದಲ್ಲಿ ಅವರು ತಮ್ಮ ಮನೆಯವರ ಹಿರಿಯ ಹೆಂಗಸರನ್ನು ಅಂದರೆ ವರನ ತಾಯಿಯನ್ನು ಮತ್ತು ಅಕ್ಕ ತಂಗಿಯರನ್ನು ಮತ್ತೊಮ್ಮೆ ನೋಡಲು ಕಳುಹಿಸುತ್ತೇವೆ ಎಂದು ಹೇಳಿ ಹೋಗುತ್ತಾರೆ. ಸಮಯವನ್ನು ನೋಡಿಕೊಂಡು ವರನ ಮನೆಯ ಹೆಂಗಸರು ಹೆಣ್ಣಿನ ಮನೆಗೆ ಬರುತ್ತಿದ್ದರು,

ಹೆಣ್ಣಿನ ಕಡೆಯವರು ಈ ಹೆಂಗಸರಿಗೂ, ಗಂಡಸರಿಗೆ ನೀಡಿದ ಅತಿಥ್ಯಯನ್ನೇ ನೀಡುತ್ತಿದ್ದರು. ಆ ಹೆಂಗಸರಿಗೆ ಹುಡುಗಿ ಇಷ್ಟವಾದಲ್ಲಿ ಹೆಣ್ಣಿನ ಕಡೆಯವರಿಗೆ ಗಂಡಿನ ಮನೆಗೆ ಒಂದು ದಿನ ಬಂದು ಹೋಗುವಂತೆ ಹೇಳಿ ಬರುತ್ತಾರೆ.

ಕೆರೆಯನ್ನು ಸ್ವೀಕರಿಸಿ, ಒಂದು ಗೊತ್ತಾದ ದಿನ. ಹೆಣ್ಣಿನ ಕಡೆಯ ಗಂಡಸರು ಗಂಡಿನ ಮನೆಗೆ ಬರುತ್ತಾರೆ. ಬರುವಾಗ ಮಾಮೂಲಿನಂತೆ ಶುಭಾಶುಭ ಶಕುನಗಳನ್ನು ಗಮನಿಸುತ್ತಾರೆ. ಆದರೆ ಗಂಡಿನವರು ಹೆಣ್ಣನ್ನು ಪರೀಕ್ಷಿಸಿ ನೋಡುವಂತೆ ಇವರು ಗಂಡನ್ನು ಪರೀಕ್ಷಿಸಿ ನೋಡುವುದಿಲ್ಲ ಗಂಡು ಮತ್ತು ಅವನ ಮನೆತನ ಹಿಡಿಸಿದರೆ ಸಾಕು.

ಆಗ ಗಂಡಿನ ಕಡೆಯ ಹಿರಿಯರು ಮತ್ತು ಹೆಣ್ಣಿನ ಕಡೆಯ ಹಿರಿಯರು ವರದಕ್ಷಿಣೆ ಮತ್ತು ಇನ್ನೀತರ ವಿಷಯಗಳ ಬಗ್ಗೆ ಎರಡೂ ಕಡೆಯ ಹಿರಿಯರು ಚರ್ಚಿಸಿ ಇಬ್ಬರಿಗೂ ಒಪ್ಪಿಗೆಯಾದ ಮೇಲೆ ನಿಶ್ಚಿತಾರ್ಥವನ್ನು ಗೊತ್ತಪಡಿಸುತ್ತಾರೆ. ಈ ನಿಶ್ಚಿತಾರ್ಥದ ಉದ್ದೇಶ ಇಬ್ಬರಿಗೂ ಮದುವೆಯಾಗಲು ಒಪ್ಪಿಗೆಯಾಗಿದೆ. ಎಂದು ತಿಳಿಸುವುದಕ್ಕಾಗಿ ಮತ್ತು ವಧು ವರರ ನಡುವೆ ಪರಿಚಯ ಅಂದಿನಿಂದ ಆರಂಭವಾಗಲಿ ಎನ್ನುವ ಉದ್ದೇಶದಿಂದ ನಿಶ್ಚಿತಾರ್ಥ ಮಾಡುತ್ತಾರೆ.

**ನಿಶ್ಚಿತಾರ್ಥ :**

ಇದು ಎಲ್ಲಾ ಸಮುದಾಯದಲ್ಲಿ ಈ ನಿಶ್ಚಿತಾರ್ಥ ಸಾಮಾನ್ಯವಾಗಿ ಕಂಡು ಬರುತ್ತದೆ ಇದನ್ನು ಕೆಲವು ಸಮುದಾಯಗಳಲ್ಲಿ ಇಳ್ಯಾ ಎಂತಲೂ ಕರೆಯುತ್ತಾರೆ. ವೈಶ್ಯರಲ್ಲಿ ಈ ನಿಶ್ಚಿತಾರ್ಥ ವಿಜೃಂಭಣೆಯಿಂದ ಅರ್ಧ ವಿವಾಹವಾದಂತೆ ಎಲ್ಲಾ ಸಂಬಂಧಿಕರ ಮಧ್ಯ ಜರಗುವುದು.

ಇದು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ಗಂಡಿನ ಮನೆಯವರು ಹೆಣ್ಣನ್ನು ಒಪ್ಪಿದ ನಂತರ ಒಂದು ಗೊತ್ತಾದ ದಿನ ಹುಡುಗಿಯ ಮನೆಗೆ ಬಂದು ತಾವು ತಂದಿದ್ದ ಹೊಸ ಸೀರೆ, ಕುಪ್ಪಸ, ಹೂ, ಹಣ್ಣು ಇತ್ಯಾಧಿಗಳಿಂದ ಸಿಂಗರಿಸಿ ಕೊಡುವ ಮತ್ತು ತೆಗೆದುಕೊಳ್ಳುವ ವಿಚಾರ ಮಾತನಾಡಿ ಮುಂದೆ ನಡೆಯುವ ನಿಶ್ಚಿತಾರ್ಥ ಅಥವಾ ಇಳ್ಯಾ ದಿನವನ್ನು ತಿಳಿಸುತ್ತಾರೆ. ಆ ದಿನದ ಸಂತೋಷಕ್ಕಾಗಿ ಸಿಹಿ ಅಡಿಗೆ ಊಟವನ್ನು ಮಾಡಿ ಊರಿಗೆ ಬರುತ್ತಾರೆ.

ಈ ನಿಶ್ಚಿತಾರ್ಥದ ದಿನಂದು ಎರಡು ಕಡೆಯ ಕುಲಬಾಂಧವರು ಸೇರುತ್ತಾರೆ. ಮಾತು ಕತೆಯಲ್ಲಿ ಕೊಡುವ ತೆಗೆದುಕೊಳ್ಳುವ ವಿಚಾರ ನಡೆಯುತ್ತದೆ. ಆದರೆ ಇಲ್ಲಿ ಹಾಗಲ್ಲ ತಮಗೆ ಬರಬೇಕಾದುದನ್ನು ತೆಗೆದು ಕೊಳ್ಳುತ್ತಾರೆ. ಕೊಡುವುದಿದ್ದರೆ ಕೊಡುತ್ತಾರೆ. ಒಂದು ಒಳ್ಳೆಯ ದಿನ ಹೆಣ್ಣಿನ ಮನಗೆ ಗಂಡಿನ ಮನೆಯವರು, ಹಿರಿಯರು, ಮಹಿಳೆಯರು, ಆಪ್ತ ಬಂಧುಗಳು ಬರುತ್ತಾರೆ. ಹಾಗೆಯೆ ಹೆಣ್ಣಿನ ಊರಿನ ಆಪ್ತ ಬಂಧೂಗಳು ಊರಿನವರು ಸೇರಿಕೊಂಡಿರುತ್ತಾರೆ. ಮುಖ್ಯವಾಗಿ ಆ ಊರಿನ ಆರ್ಯ ವೈಶ್ಯ ಸಂಘದ ಸದಸ್ಯರು ಮತ್ತು ಸಂಘದ ಅಧ್ಯಕ್ಷರ ಸಮ್ಮುಖದಲ್ಲಿ ಎಲ್ಲಾ ಕಾರ್ಯಕ್ರಮ ನೆಡೆಯುತ್ತದೆ. ಅಂದು ಹೆಣ್ಣಿಗೆ ಹೊಸ ಸೀರೆ, ಒಡವೆ, ಆಭರಣಗಳಿಂದ ಸಿಂಗರಿಸಿಡುತ್ತಾರೆ. ಹುಡುಗನು ಹೊಸ ಬಟ್ಟೆ ಧರಿಸುತ್ತಾನೆ. ತಾನು ತಂದ ಪ್ರಿಯ ಉಡುಗೊರೆ ಉಂಗುರವನ್ನು ಅವಳಿಗೆ ತೊಡಿಸುತ್ತಾನೆ. ಹಾಗೆ ಹುಡುಗಿಯ ಮನೆಯವರು ಏನಾದರು ಬಂಗಾರದ ಸರವನ್ನು ಅಥವಾ ಅವರ ಯೋಗ್ಯತೆಯ ತಕ್ಕ ಹಾಗೆ ಕೊಡತ್ತಾರೆ.

**ಲಗ್ನ ಪತ್ರಿಕೆಯ ರಚನೆ :**

ನಿಶ್ಚಿತಾರ್ಥ ಮುಗಿದ ನಂತರ ಅಥವಾ ಅಂದಿನ ದಿನವಾದರೂ ಮದುವೆಯ ದಿನಾಂಕವನ್ನು ಎಲ್ಲಾ ಹಿರಿಯರು ಸೇರಿ ಪಂಚಾಂಗವನ್ನು ನೋಡಿ ಪುರೋಹಿತರ ಮೂಲಕ ಒಳ್ಳೆಯ ಶುಭ ದಿನವನ್ನು ಗೊತ್ತ ಪಡಿಸುತ್ತಾರೆ. ಆ ದಿನವನ್ನು ವಧು ವರರ ಕಡೆಯವರು ಒಪ್ಪಿದ ನಂತರ ಪುರೋಹಿತರ ಕೈಯಲ್ಲಿ ಅಂದಿನ ದಿನ ಅಂದರೆ ಮದುವೆಯ ದಿನವನ್ನು ಅಂದಿನ ರಾಶಿ, ನಕ್ಷತ್ರ, ಸಮಯವನ್ನು ಅವರ ಕೈಯಲ್ಲಿ ಬರೆಸುತ್ತಾರೆ. ಅದನ್ನು ಮುದ್ರಣ ಹಾಕಿಸಿ ಆ ಲಗ್ನ ಪತ್ರಿಕೆ ಅಥವಾ ಮದುವೆಯ ಕರೆಯೋಲೆಗೆ ಅರಿಶಿಣ ಕುಂಕುಮ ಹಾಕಿ ಪೂಜೆ ಮಾಡಿ ನಂತರ ಎಲ್ಲರಿಗೂ ಕಳುಹಿಸುತ್ತಾರೆ.

**ಮದುವೆಯ ಕರೆ :**

ಲಗ್ನ ಪತ್ರಿಕೆಗಳು ಅಚ್ಚಾ ದ ಮೇಲೆ ಅವನ್ನು ಕಳುಹಿಸುವುದರ ಜೊತೆಗೆ ಹತ್ತಿರದ ನೆಂಟರನ್ನು ಮನೆಯವರೇ ಸ್ವತಃ ಹೋಗಿ ಕೈ ಜೋಡಿಸಿ ನಿಂತು ಕರೆದು ಬರುವ ಪದ್ದತಿ ಇದನ್ನು 'ಮದುವೆ ಕರೆ' ಎಂದು ಕರೆಯುತ್ತಾರೆ. ಇನ್ನೂ ದೂರ ದೂರ ಇರುವ ಸಂಬಂಧಿಕರಿಗೆ ಅಂಚೆ ಮೂಲಕ ಲಗ್ನ ಪತ್ರಿಕೆಗಳನ್ನು ಕಳುಹಿಸುತ್ತಾರೆ. ಇಲ್ಲವೇ ಪೋನ್ ಮೂಲಕ ಹಾಗೂ ಇಂಟರ್‌ನೆಟ್ ಮೂಲಕ ಸುದ್ದಿಯನ್ನು ಈಗ ತಿಳಿಸುತ್ತಾರೆ. ಇದಲ್ಲದೇ ಇನ್ನೂ ಅನೇಕರ ದಿನ ಪತ್ರಿಕೆಗಳ ಮೂಲಕ ಜಾಹೀರಾತು ನೀಡಿ ಮದುವೆ ಕರೆ ತಿಳಿಸುತ್ತಾರೆ.

ಮದುವೆ ಗೊತ್ತಾದ ದಿನದಿಂದ ಅನೇಕ ಆಚರಣೆ ಸಂಪ್ರದಾಯಗಳು ನಡೆಯುತ್ತಲೆ ಇರುತ್ತವೆ. ಮದುವೆ ದಿನ ಸಮೀಪ ಬರುತ್ತಿರುವಾಗ ಆಚರಣೆ ಮತ್ತು ಸಂಪ್ರಾದಾಯಗಳು ಹೆಚ್ಚು. ಇನ್ನೂ ಊರಿನವರಿಗೆ ಹಾಗೂ ಅಲ್ಲಿನ ಆರ್ಯ ವೈಶ್ಯ ಸಮುದಾಯಗಳಿಗೆ ಮದುವೆಯ ಮುಂದಿನ ದಿವಸ ಮೆರವಣಿಗೆಯ ಮೂಲಕ ಎಲ್ಲಾ ವಾದ್ಯಗಳೊಂದಿಗೆ ವಧು ಅಥವಾ ವರರ ಮನೆಯ ಎಲ್ಲಾ ಸಂಬಂಧಿಕರು ವೈಶ್ಯರ ಮನೆ ಮನೆಗೆ ಮುತ್ತೈದೆಯರು ಕಳಸ ಮತ್ತು ಅರಿಶಿಣ ಕುಂಕುಮ ತಟ್ಟೆಯನ್ನು ಹಿಡಿದು ಎಲ್ಲಾ ವೈಶ್ಯ ಬಾಂಧವರು ಮನೆಗೆ ಹೋಗಿ ಮಾಂಗಲ್ಯದ ಸಮಯ ಮತ್ತು ಇನ್ನಿತರ ಕಾರ್ಯಕ್ರಮಗಳ ಬಗ್ಗೆ ಹೇಳಿ ಲಗ್ನ ಪತ್ರಿಕೆ ಮತ್ತು ತಾಂಬೂಲ ಅಂದರೆ ಎಲೆ ಅಡಿಕೆಯನ್ನು ಕೊಟ್ಟು ಆಹ್ವಾನಿಸುವ ಪದ್ದತಿ ಈ ಸಮುದಾಯದಲ್ಲಿ ಇದೆ.

**ಹಂದರ :**

ಮನೆಯನ್ನು ಸುಣ್ಣ ಬಣ್ಣಗಳಿಂದ ಸ್ವಚ್ಛಗೊಳಿಸುತ್ತಾರೆ. ಮನೆಯ ಮುಂದಿನ ಅಂಗಳದಲ್ಲಿ ದೊಡ್ಡ ಚಪ್ಪರವನ್ನು ಹಾಕುತ್ತಾರೆ. ಈ ಕೆಲಸ ಕಾರ್ಯಗಳಲ್ಲಿ ಊರಿನವರು, ಆಪ್ತ ಬಂಧುಗಳು ಸೇರಿಕೊಂಡಿರುತ್ತಾರೆ. ಚಪ್ಪರದ ಕಂಬಗಳಿಗೆ ಮಾವಿನ ಸೊಪ್ಪು, ಹೂ ಕಟ್ಟಿ ಉಳಿದುದನ್ನು ಚಾವಣೆಗೆ ತೂಗಿ ಬಿಡುತ್ತಾರೆ. ಚಪ್ಪರದ ಕೆಳಭಾಗವನ್ನು ಸ್ವಚ್ಛಗೊಳಿಸಿರುತ್ತಾರೆ. ಚಪ್ಪರದ ಮೇಲಿನ ಭಾಗಕ್ಕೆ ತೆಂಗಿನ ಗರಿಗಳನ್ನು ಹೊದಿಸಿರುತ್ತಾರೆ ಹಾಗೂ ಒಂದು ಹಿಡಿ ತೆಂಗಿನಕಾಯಿಯನ್ನು ಚಪ್ಪರದ ಮಧ್ಯ ಕಟ್ಟಿರುತ್ತಾರೆ. ಇದು ಇವರ ಸಂಪ್ರದಾಯ ಮದುವೆಯ ಅನೇಕ ಶಾಸ್ತ್ರ, ವಿಧಿಗಳು ಇದರ ತಳದಲ್ಲಿ ನಡೆಯುತ್ತವೆ. ಧಾರಾ ಮಂಟಪವನ್ನು ಅಲ್ಲಿಯೇ ಮಾಡಲಾಗುತ್ತದೆ. ನಾಲ್ಕು ಕಂಬಗಳನ್ನು ನೆಟ್ಟು ಅ ನಾಲ್ಕು ಕಂಬಗಳನ್ನು ಬಣ್ಣದ ಪೇಪರಿನಿಂದ ಸುತ್ತಿ ಮಂಟಪದ ಮೇಲಿನ ಭಾಗದಿಂದ ಹೂ ಮಾಲೆಯನ್ನು ಅಂದಕಾಣುವಂತೆ ಕ್ರಮವಾಗಿ ನೇತು ಬಿಡುತ್ತಾರೆ.

**ದೇವತಾ ಕಾರ್ಯ :**

ಮದುವೆಯ ಮುಂದಿನ ದಿನದಂದು ಮೊದಲಿಂಗ ಅಥವಾ ಮೊದಲಗಿತ್ತಿಯನ್ನು ಅನೇಕ ಶಾಸ್ತ್ರಗಳಿಂದ ದೇವರ ಪೂಜೆಯ ಮೂಲಕ ಅವರನ್ನು ಮೊದಲಿಂಗ ಅಥವಾ ಮೊದಲಗಿತ್ತಿಯನ್ನು ಊರಿನ ಹಿರಿಯರು ಮತ್ತು ಅದೇ ಸಮುದಾಯದ ಮುತ್ತೈದೆಯರು ಮಾಡುತ್ತಾರೆ ಅದಕ್ಕೆ ಇದನ್ನು ದೇವತಾ ಕಾರ್ಯ ಎಂದು ಕರೆಯುತ್ತಾರೆ. ಮೊದಲಿಂಗ ಅಥವಾ ಮೊದಲಗಿತ್ತಿಯನ್ನು ಅನೇಕ ಶಾಸ್ತ್ರಗಳಿಂದ ಮಾಡಲಾಗುವುದು. ವಧು ಮತ್ತು ವರನಿಗೆ ಮೊದಲು

ಎಣ್ಣೆ ನೀರು ಹಾಕುತ್ತಾರೆ ಹಾಗೂ ಎಲ್ಲಾ ನೆಂಟರೂ ಸೇರಿ ವರನಿಗೆ ಆಗಲಿ ಅಥವಾ ವಧುವಿಗೆ ಆಗಲಿ ತಮಾಷೆ ಮಾಡುತ್ತಾ ಅನೇಕ ಬಣ್ಣ ಬಣ್ಣದ ನೀರು ಹಾಕಿ ಅವರನ್ನು ಅ ನೀರಿನ ಮೂಲಕ ಸ್ನಾನ ಮಾಡಿಸಿ ಅಂದು ಹೊಸ ಬಟ್ಟೆಯನ್ನು ಹಾಕಿ ಮದುಮಗನನ್ನು ಮಾಡುತ್ತಾರೆ. ನಂತರ ಊರಿನ ಎಲ್ಲಾ ದೇವಲಯಗಳಿಗೆ ಅನೇಕ ವಾಧ್ಯಗಳ ಮೂಲಕ ಎಲ್ಲಾ ಸಂಬಂಧಿಕರು ಸೇರಿ ದೇವಾಲಯಗಳಿಗೆ ಹೋಗಿ ಬರುತ್ತಾರೆ. ಅಂದಿನಿಂದ ಮದುವೆಗೆ ನಾನಗೋಲಿಶಾಸ್ತ್ರ ಮುಗಿಯುವವರೆ ಮಡಿಯಿಂದ ಅಂದರೆ ಕಸಬರಿಕೆ. ಪಾದರಕ್ಷೆ ಇಂತಹ ವಸ್ತುಗಳನ್ನು ಮುಟ್ಟಬಾರದು ಹಾಗೂ ಬರೀ ನೆಲದ ಮೇಲೆ ಕುಳಿತುಕೊಳ್ಳಬಾರದು ಎನ್ನುವ ಸಂಪ್ರದಾಯ ಇವರಿಲ್ಲದೆ. ಅಂದು ಮದುಮಗನ ಕೈಯಲ್ಲಿ ಒಂದು ತಂಗಿನ ತಾಯಿ ಮತ್ತು ಒಂದು ವಸ್ತ್ರವನ್ನು ಕೊಡುತ್ತಾರೆ ಇವೇ ಮದುಮಗನ ಸಂಕೇತಗಳು.

**ದೈವದ ಊಟ :**

ಇದು ವೈಶ್ಯರಲ್ಲಿ ತಲ ತಲಾಂತರದಿಂದ ನಡೆದುಕೊಂಡು ಬಂದಿದೆ. ಮದುವೆಯ ಮುಂದಿನ ದಿನ ವಧು ವರರ ಊರಿನಲ್ಲಿ ಎಲ್ಲಾ ವೈಶ್ಯರ ಮನೆಯವರಿಗೆ ಊಟ ಹಾಕುವ ಪದ್ಧತಿ ನಡೆದುಕೊಂಡು ಬಂದಿದೆ. ಅಂದಿನ ದಿನ ಎಲ್ಲಾ ಮನೆಯವರು ವಧು ಅಥವಾ ವರರ ಮನೆಗೆ ಬಂದು ಊಟ ಮಾಡಿಕೊಂಡು ತಾಂಬೂಲ ತೆಗೆದುಕೊಂಡು ಹೋಗುವ ಪದ್ಧತಿ ನೆಡೆದುಕೊಂಡು ಬಂದಿದೆ. ದೈವದ ಊಟವನ್ನು ಒಂದು ವೇಳೆ ಹಾಕಿಸಲು ಆಗದೇ ಹೋದಾಗ ಅಲ್ಲಿನ ಆರ್ಯವೈಶ್ಯ ಸಂಘದವರಿಗೆ ಇಂತಿಷ್ಟು ಹಣವನ್ನು ಸಂಘಕ್ಕೆ ನೀಡುವುದು ರೂಢಿಯಲ್ಲಿದೆ. ಇದು ಅವರವರ ಇಷ್ಟ ವಾಗಿರುತ್ತದೆ.

ಇಷ್ಟೆಲ್ಲಾ ಕಾರ್ಯಕ್ರಮಗಳನ್ನು ಮದುವೆಯ ಮುಂದಿನ ದಿನವೇ ಮಾಡುತ್ತಾರೆ ಅಂದು ಸಂಜೆ ಮದುವೆಯನ್ನು ಕಲ್ಯಾಣ ಮಂಟಪಗಳಲ್ಲಿ ಏರ್ಪಡಿಸಿದ್ದರೆ. ಅಲ್ಲಿಗೆ ಹೋಗಲು ತಯಾರಾಗುತ್ತಾರೆ. ಇಲ್ಲವೇ ಗಂಡಿನ ಮನೆಯ ಮುಂದೆ ಏರ್ಪಟ್ಟಿದ್ದರೆ ಅಲ್ಲಿಗೆ ಹೋಗಲು ವಾಹನಗಳನ್ನು ತೆಗೆದುಕೊಂಡು ಎಲ್ಲಾ ಅವರ ಸಂಬಂಧಿಕರು ಮತ್ತು ಊರಿನ ಹಿರಿಯರು ಅವರ ಲಗೇಜುಗಳನ್ನು ತೆಗೆದುಕೊಂಡು ಅನೇಕ ಒಡವೆ ಆಭರಣಗಳನ್ನು ಧರಿಸಿಕೊಂಡು ಮದುವೆಗೆ ಸಿದ್ದರಾಗುತ್ತಾರೆ.

ಒಟ್ಟಿನಲ್ಲಿ ಮದುವೆ ಎಲ್ಲೇ ನಡೆದರೂ ಮದುವೆ ಮುಂಚಿತ ದಿನ ಎರಡೂ ಕಡೆಯವರು ಸೇರುತ್ತಾರೆ.

**ಸ್ವಾಗತ ಸತ್ಕಾರ (ಎದರುಕೊಂಡು ಕೊಳ್ಳುವುದು) :**

ಮದುವೆಗೆ ಬಂದವರನ್ನು ಹಾಗೂ ವರನ ಕಡೆಯವರನ್ನು ಕನ್ಯಾದಾತನು ಎದುರ್ಗೊಂಡು ಮಂಗಳ ವಾದ್ಯದೊಂದಿಗೆ ಅವರನ್ನು ವಿವಾಹ ಮಂದಿರಕ್ಕೆ ಕರೆತರುವುದು ಅವರಿಗೆ ಉಪಚಾರ ಮಾಡಿ ಬಿಡದಿ ಮನೆಯನ್ನು ಕಲ್ಪಿಸುವುದು.

ವರನು ತನ್ನ ಊರಿನಿಂದ ವಧುವಿನ ಊರಿಗೆ ಅಥವಾ ಹತ್ತಿರದ ಯಾವುದಾದರೂ ಕಲ್ಯಾಣ ಮಂಟಪದಲ್ಲಿ ವಿವಾಹ ಏರ್ಪಾಡಾಗಿರುವುದು ತಿಳಿಸಿರುತ್ತಾರೆ. ಆ ಗ ವರನ ಕಡೆಯ ಎಲ್ಲಾ ಸಂಬಂಧಿದಕರು ಮತ್ತು ಹಿರಿಯರು ಬಂದ ಕೂಡಲೇ ವರನನ್ನು ಅಲ್ಲಿನ ದೇವಸ್ಥಾನಗಳಲ್ಲಿ ಇರುವಂತೆ ಹೇಳಿ ನಂತರ ವಧುವಿಗೆ ಕಡೆಯವರು ಕಲ್ಯಾಣ ಮಂಟಪಕ್ಕೆ ಅನೇಕ ವಿಧ ವಿಧವಾದ ವಾಧ್ಯಗಳ ಮೂಲಕ ವರನನ್ನು ವಧುವಿನ ಕಡೆಯವರು ದೇವಸ್ಥಾನದಿಂದ ಮೆರೆವಣಿಗೆಯ ಮೂಲಕ ಕರೆ ತರುತ್ತಾರೆ. ಅಲ್ಲಿ ಕಲ್ಯಾಣ ಮಂಟಪದ ಎದುರು ವಧು ವರನಿಗಾಗಿ ಸ್ವಾಗತಕ್ಕೆ ಕಾಯುತ್ತಿರುತ್ತಾರೆ. ವಧು ರಿಬ್ಬನ್ ಕಟ್ ಮಾಡುವ ಮೂಲಕ ಕಲ್ಯಾಣ ಮಂಟಪಕ್ಕೆ ಪಾದಾರ್ಪಣೆ ಮಾಡುತ್ತಾನೆ. ಅಲ್ಲಿ ವಧು ವರನಿಗೆ ಗುಲಾಬಿ ಅಥವಾ ಇನ್ನೀತರ ಹೂಗಳನ್ನು ನೀಡಿ ಸ್ವಾಗತ ಕೋರುತ್ತಾಳೆ. ಇದು ಇವರ ಮೂಲ ಪದ್ಧತಿಯಾಗಿದೆ.
ಎಲ್ಲರೂ ಕಲ್ಯಾಣ ಮಂಟಪಕ್ಕೆ ಬಂದಾಗ ವರನ ಕಡೆಯವರಿಗೆ ಅಂದಿನಿಂದ ಅತಿಥ್ಯ ಆರಂಭವಾಗುವುದು ಆಗ ಎಲ್ಲರಿಗೂ ಕುಡಿಯಲು ಪಾನಕ ಮತ್ತು ತಿನ್ನಲು ಕೋಸಂಬರಿಯನ್ನು ಕೊಡಲು ಆರಂಭಿಸುತ್ತಾರೆ. ಇದಾದ ನಂತರ ಎಲ್ಲರೂ ಮುಂದಿನ ಕಾರ್ಯಕ್ರಮಕ್ಕೆ ಸಿದ್ಧತೆ ನೆಡೆಸಿಕೊಳ್ಳುತ್ತಾರೆ.

**ವರ ಪೂಜೆ :**

ಮದುವೆಗೆ ಬಂದ ವಧೂವರರ ಕಡೆಯವರು ಯಾವುದಾದರೂ ದೇವಾಲಯಕ್ಕೆ ಹೋಗುವುದು. ದೇವರ ಮಂಗಳಾರತಿಯಾದ ಮೇಲೆ ಕನ್ಯಾಧಾತನು ತನ್ನ ಧರ್ಮ ಪತ್ನಿಯೊಂದಿಗೆ ವರನನ್ನು ಮುಂದೆಮಾಡಿಕೊಂಡು ಮಂಗಳ ವಾದ್ಯಗಳೊಂದಿಗೆ ಎಲ್ಲರೂ ವಿವಾಹ ಮಂಟಪಕ್ಕೆ ಬರುತ್ತಾರೆ.

ಮಗನಿಗೆ ಸಮಾನವಾದ ಭಾವಿ ಅಳಿಯನ ಕಾಲನ್ನು ಅತ್ತೆ-ಮಾವಂದಿರು ತೊಳೆದು ಸಿಂಗಾರ ಮಾಡುವಂತಹ 'ವರ' ಪೂಜೆ ಇವರಲ್ಲಿದೆ.

**ಬಿಡದಿ ಮನೆ :**

ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಒಂದು ದಿನ ಮೊದಲೇ ಬರುತ್ತಾರೆ. ಗಂಡಿನ ಮನೆಯಿಂದ ಹೊರಡುವಾಗ ಶಕುನ ನೋಡಿ ಬರುತ್ತಾರೆ. ಅಲ್ಲಿಯು ಚಪ್ಪರವನ್ನು ಹಾಕಲಾಗುತ್ತದೆ. ಧಾರಣೆ ಮೊದಲೆ ಹೆಚ್ಚು ಗಂಡಿನ ಮನೆಯನ್ನು ಪ್ರವೇಶ ಮಾಡುವಂತಿಲ್ಲ, ಈ ಕಾರಣದಿಂದ ಅವರಿಗಾಗಿ ತಮ್ಮ ಮನೆಯ ಹೊರಗಿನ ಕೊಠಡಿಯನ್ನು ಬಿಟ್ಟು ಕೊಡುತ್ತಾರೆ. ಇದನ್ನು 'ಬಿಡದಿ ಮನೆ' ಎಂದು ಕರೆಯಲಾಗುತ್ತದೆ ಬಂದ ಅತಿಥಿಗಳನ್ನು ಸ್ವಾಗತ ಮಾಡುವ ಮೊದಲು ಅವರಿಗೆ ಎಲ್ಲಾ ವ್ಯವಸ್ಥೆಯನ್ನು ಮಾಡಿರುತ್ತಾರೆ.

**ನಿಶ್ಚಿತಾರ್ಥ :**

ವಿವಾಹ ಮಂಟಪದಲ್ಲಿ ವಧೂವರರು ಮತ್ತು ಅವರ ತಂದೆ ತಾಯಿಯವರು ಹಸಿಯ ಮೇಲೆ ಕುಳಿತು ಕೊಳ್ಳುತ್ತಾರೆ. ಗಣಪತಿ ಹಾಗು ಶಚೀ ಪುರಂದರರ ಪೂಜೆಯನ್ನು ಮಾಡುತ್ತಾರೆ, ನಂತರ ವಧೂವರರ ಗೋತ್ರ ಪ್ರವರಗಳನ್ನು ಹೇಳುತ್ತಾರೆ. ಅನಂತರ 'ವಾಚಾದತ್ತಾ-ಸುಖೀಭವ' ವಧುವಿನ ತಂದೆ ಕನ್ಯೆಯನ್ನು ಕೊಡಲು ಒಪ್ಪಿರುವನು ಇವಳನ್ನು ನಿನ್ನ ಮಗನ ಹೆಂಡತಿಯಾಗಿ ಸ್ವೀಕರಿಸು ಎಂದು ಅವಳನ್ನು ಸರಿಯಾಗಿ ನೋಡಿಕೋ ಎಂದು ಸುಖಿಯಾಗು ಎಂದು ಕನ್ಯಾಧಾತನು ಹೇಳುತ್ತಾನೆ. ನೀನು ಕೊಡಲು ಒಪ್ಪಿರುವ ಕನ್ಯೆಯನ್ನು ನನ್ನ ಮಗನಿಗಾಗಿ ಸ್ವೀಕರಿಸುತ್ತೇನೆ ಎಂದು ವರನ ತಂದೆ ಹೇಳುವನು ವಧೂ-ವರರ ಕಡೆಯವರು ಒಪ್ಪಿದ ಮೇಲೆ ಲಗ್ನಪತ್ರಿಕೆಯನ್ನು ಓದುತ್ತಾರೆ. ವಧೂ-ವರರ ತಂದೆಯವರು, ಗೌರವ ಪೂರ್ವಕವಾಗಿ ಆ ಲಗ್ನಪತ್ರಿಕೆಯನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಹಿರಿಯರಿಗೆ ಸಾಕ್ಷಿಯಾಗಿ ತಾಂಬೂಲವನ್ನು ಕೊಡುತ್ತಾರೆ.

**ಮದುವೆಯ ದಿನ :**

ಈ ದಿನ ಹೆಣ್ಣಿನ ಕಡೆಯ ವೈಶ್ಯರಲ್ಲಿ ವಿಶೇಷವಾದ ದಿನ ಎಂದು ಹೇಳಬಹುದು ಏಕೆಂದರೆ ವೈಶ್ಯರಲ್ಲಿ ಅನೇಕ ಸಂಪ್ರದಾಯಗಳು ಹಾಗೂ ತುಂಬಾ ವರದಕ್ಷಿಣೆ ಪದ್ಧತಿ ಜಾರಿಯಲ್ಲಿರುವುದರಿಂದ ವಧುವಿನ ತಾಯಿ ತಂದೆಯವರು ಅನೇಕ ಕಷ್ಟಪಟ್ಟು ಮದುವೆಗೆ ಎಲ್ಲಾ ಜೋಡಣೆಯನ್ನು ಮಾಡಿಕೊಂಡಿರುತ್ತಾರೆ. ಮದುವೆಯ ಅನೇಕ ಶಾಸ್ತ್ರಗಳು ಧಾರೆಯ ದಿನವೇ

ನಡೆಯುವುದರಿಂದಾಗಿ ಜನಪದರು ಅಂದಿನ ದಿನವನ್ನೇ ಮದುವೆಯ ದಿನವೆನ್ನುತ್ತಾರೆ. ಆ ದಿನ ಮುಂಜಾನೆಯಿಂದಲೇ ವಧು ವರರ ಸಂಬಂಧಿಕರು, ಮದುವೆಯ ಕಾರ್ಯಗಳಲ್ಲಿ ನೆರವು ನೀಡಲು ಸೇರಿರುತ್ತಾರೆ. ಹಾಡುಗಾರ್ತಿಯರ ಹಾಡಿನ ಮಧುರ ರಂಗಲಾಪ ಮುಂಜಾನೆಯಿಂದಲೇ ತೇಲಿ ಬರುತ್ತದೆ. ಮದುವೆಗೆ ಬೇಕಾದ ಹೂ, ತೆಂಗಿನಕಾಯಿ, ವೀಳ್ಯದಲೆ, ಅಡಿಕೆ ಬಾಳೆಯಲೆಯಲ್ಲಾ ಅಲ್ಲಲ್ಲಿ ತುಂಬಿಕೊಂಡಿರುತ್ತದೆ.

**ಸುರಗಿ ಸುತ್ತುವುದು :**

ಐದು ಜನ ಮುತ್ತೈದೆಯರು ಗಂಗೆಯನ್ನು ಪೂಜಿಸಿ ಬಿಂದಿಗೆಗಳನ್ನು ತುಂಬಿಸಿಕೊಂಡು, ನೀರು ತುಂಬಿದ ಬಿಂದಿಗೆಗಳನ್ನು ಮನೆ ಮುಂದೆ ಆಗಲೇ ನಿರ್ಮಿಸಿದ ಹಂದರದ ಕೆಳಗೆ ಕ್ರಮವಾಗಿ ಇಡುತ್ತಾರೆ. ಅವುಗಳನ್ನು ಒಂದು ವೃತ್ತಾಕರದಲ್ಲಿ ಇಟ್ಟು ಅ ಬಿಂದಿಗೆಗಳ ಕಂಠಕ್ಕೆ ಅರಿಸಿನ ಕುಂಕುಮ ಲೇಪಿತ ದಾರವನು ಐದು ಸುತ್ತು ಸುತ್ತುತ್ತಾರೆ, ವೃತ್ತಾಕಾರವು ದೊಡ್ಡದಾಗಿರುತ್ತದೆ. ಹೀಗೆ ಮಾಡುವುದರ ಮೂಲಕ ಸಾಮಾನ್ಯವಾದ ಸ್ಥಳವನ್ನು ಅ-ಸಾಮಾನ್ಯ ಗೊಳಿಸಲಾಯಿತು. ಅಂದರೆ ಆ ಸ್ಥಳಕ್ಕೆ 'ಪ್ರತ್ಯೇಕ ಅಸ್ತಿತ್ವ'ವೊಂದು ಸಿದ್ದವಾಗುತ್ತದೆ. ಆಗ ಅದರ ಮಧ್ಯೆ ಮದುಮಗ-ಳು ಅವರ ತಂದೆ ತಾಯಿಗಳು ಅಲ್ಲಿ ಅವರಿಗೆ ನೀರನ್ನು ಹಾಕುತ್ತಾರೆ. ಆಗ ಅವರ ಸಂಬಂಧಿಕರು ಅವರಿಗೆ ಹೊಸ ಬಟ್ಟೆಗಳನ್ನು ಮತ್ತು ಊಡುಗೊರೆಯೂ ನೀಡುತ್ತಾರೆ. ಹೀಗೆ ನೀಡುವುದನ್ನು ಸುರಗಿ ಬಟ್ಟೆ ಎಂದು ಕರೆಯುತ್ತಾರೆ. ಇವುಗಳನ್ನು ಸಾಮಾನ್ಯವಾಗಿ ತವರು ಮನೆಯವರು ತಂದು ಕೊಡಬೇಕು ಎನ್ನುವುದು ಇವರ ಸಂಪ್ರದಾಯವಾಗಿದೆ.

**ಸುರಗಿ ನೀರು :**

ಸುರಣಿ ನೀರು ಹಾಕುವುದಕ್ಕೆ ಹಿನ್ನಲೆ ಕುಲಕಥನದಲ್ಲಿರುವ ಒಂದು ಘಟನೆಯನ್ನು ಈ ಆಚರಣೆಗೆ ಪೂರಕವಾಗಿ ಬಳಸುತ್ತಾರೆ. ಆ ಕಲೆಯಂದರೆ 'ಒಂದು ಸಾರಿ ಕುಲದ ಗಂಡಸೆರೆಲ್ಲಾ ದಂಡಿಗೆ ಹೋದರಂತೆ ಹೋಗುವಾಗ ತಮ್ಮ ಜೊತೆಯಲ್ಲಿದ್ದ ನಾಯಿಗಳನ್ನು ಕರೆದುಕೊಂಡು ಹೋದರಂತೆ ಯುದ್ಧದಲ್ಲಿ ಗೆದ್ದರೆ ನಾವೇ ಬರುತ್ತವೆ. ಇಲ್ಲದಿದ್ದರೆ ನಮ್ಮ ಜೊತೆಯಲ್ಲಿರುವ ಈ ನಾಯಿಗಳು ಮಾತ್ರ ಬರುತ್ತೇವೆ ಎಂದು ಹೇಳಿ ಹೋದರಂತೆ ಯುದ್ಧದಲ್ಲಿ ಇವರೇ ಗೆದ್ದರು ವಿಜಯೋತ್ಸವವನ್ನು ಆಚರಿಸುವ ಸಂಭ್ರಮದಲ್ಲಿ ತಮ್ಮ ಜೊತೆಯಲ್ಲಿ ತಂದಿದ್ದ ನಾಯಿಗಳನ್ನು ಮರೆತು ಬಿಟ್ಟರು. ಆಗ ನಾಯಿಗಳು ಊರನ್ನು ಇವರಿಗಿಂತ ಮೊದಲೇ ಸೇರಿಬಿಟ್ಟವು. 'ಓ ನಮ್ಮ ಗಂಡಂದಿರೆಲ್ಲಾ ಯುದ್ದದಲ್ಲಿ ಸತ್ತು ಹೋದರೆಂದು ಕುಲದ ಹೆಂಗಸರೆಲ್ಲಾ ಬೆಂಕಿಗೆ ಸತಿ

ಮಾಡಿಕೊಂಡರು. ಇದು ಇವರಲ್ಲಿ ಇರುವ ಒಂದು ನಂಬಿಕೆ ಅಥವಾ ಸಂಪ್ರದಾಯವಾಗಿದೆ. ಸುರಣಿ ನಡೆದ ಮೇಲೆಯೇ ನಂತರದ ಕಾರ್ಯ ಕ್ರಮಗಳು ಆರಂಭವಾಗುವವು. ಹೀಗೆಲ್ಲ ಮಾಡುವುದರಿಂದ ಮದುಮಗ-ಳನ್ನು ಸಾಮಾನ್ಯ ಜೀವನ ಕ್ರಮದಲ್ಲಿ ಪ್ರತ್ಯೇಕಿಸುತ್ತದೆ. ಮತ್ತು ಹಾಗೆ ಪ್ರತ್ಯೇಕಿಸುವುದರಿಂದಾಗಿ ಮಾತ್ರ ಸಾಮಾನ್ಯ ಜೀವನ ಕ್ರಮದಲ್ಲಿ ಅವರು 'ಅಸಾಮಾನ್ಯ'ರಾಗಿ ಪ್ರತ್ಯೇಕ ಸ್ಥಾನವನ್ನು ಗಳಿಸಿಕೊಳ್ಳುತ್ತಾರೆ. ಇದು ಸ್ಪಷ್ಟವಾಗಲು ಅವರಿಗೆ ಸ್ನಾನ ಮಾಡಿಸುತ್ತಾರೆ. ಅಂದರೆ ಅರಿಶಿಣ ಮತ್ತು ಮುಂತಾದ ನೀರಿನಿಂದ ಸ್ನಾನವಾದ ಮೇಲೆ ಸ್ವಚ್ಛವಾಗಲು ಮತ್ತೊಮ್ಮೆ ಸ್ನಾನ ಮಾಡಿಸುತ್ತಾರೆ. ಅಲಂಕಾರ ಮಾಡುತ್ತಾರೆ. ಇಷ್ಟೆಲ್ಲಾ ಅದನಂತರ ಮದು ಮಗಳನ್ನು ಬಿಡದಿ ಮನೆಗೆ ಕರೆದೊಯುತ್ತಾರೆ. ಇಲ್ಲಿ ಮದುಮಗಳ ಅಲಂಕಾರ ಮಾಡುತ್ತಾರೆ. ಇಲ್ಲಿ ಹೆಂಗಸರದೆ ಮೇಲುಗೈ. ಇತ್ತ ಗಂಡಿಗೂ ಅಲಂಕಾರ ಮಾಡುತ್ತಾರೆ.

**ಮಧು ಪರ್ಕ :**

ಮದುವೆಗೆ ಬಂದ ವರನು ನಾರಾಯಣ ಸ್ವರೂಪನೆಂದು ಭಾವಿಸಿ ಅನಂತರ ಮಧುಪರ್ಕವನ್ನು (ಮೊಸರು ಚಿರತ ಜೇನು ತುಪ್ಪವನ್ನು) ಮತ್ತು ಮುಹೂರ್ತದ ಬಟ್ಟೆಯನ್ನು ವರನಿಗೆ ಕೊಟ್ಟು ಉಪಚರಿಸುತ್ತಾನೆ. ವರನು ಮಧುಪರ್ಕವನ್ನು ತಿಂದು ಮಾವನು ಕೊಟ್ಟ ಬಟ್ಟೆಗಳನ್ನು ಗೃಹಸ್ಥಾಶಮ ಯೋಗ್ಯತಾಸಿದ್ಧಿಗಾಗಿ ದ್ವಿತೀಯ ಯಜ್ಞೋಪವೀತವನ್ನು ಮತ್ತು ಬಾಷಿಂಗವನ್ನು ಧರಿಸಿ ಮುಹೂರ್ತದ ದಾರಿ ನೋಡುತ್ತಿರುತ್ತಾನೆ.

**ಗೌರಿ ಪೂಜೆ :**

ವಧುವು ಮುಹೂರ್ತದ ಬಟ್ಟೆಗಳನ್ನುಟ್ಟು ದೇವರ ಕೋಣೆಯನ್ನು ಗೌರಿ ಮತ್ತು ತೌರು ಮನೆಯ ಮಾಂಗಲ್ಯ ಪೂಜೆಯನ್ನು ಮಾಡುತ್ತಿರುತ್ತಾಳೆ. ಗೌರಿಗೆ ಮತ್ತು ತಾಯಿಗೆ ಬಾಗೆನವನ್ನು ಕೊಡುತ್ತಾರೆ. ತೌರುಮನೆಯ ತಾಳಿಯನ್ನು ಮತ್ತು ಭಾಷಿಂಗವನ್ನು ಧರಿಸಿ ಮುಹೂರ್ತವನ್ನು ಕಾಯುತ್ತಿರುತ್ತಾಳೆ.

ವೈಶ್ಯರಲ್ಲಿ ಮುಖ್ಯವಾಗಿ ವಿವಾಹದ ದಿನ ತಪ್ಪದೇ ವಧು ಈ ಪೂಜೆಯನ್ನು ಸುಮಾರು 2 ಗಂಟೆಗಳ ಕಾಲ ಪೂಜೆಯನ್ನು ಮಾಡುತ್ತಾಳೆ. ಕನ್ಯೆಯನ್ನು ಆ ಪೂಜೆಯಿಂದಲೇ ವಿವಾಹ ಮಂಟಪಕ್ಕೆ ಕರೆತರುತ್ತಾರೆ. ವಧು ಗೌರಿ ಪೂಜೆಯನ್ನು ಬಹಳ ಶ್ರದ್ಧಾಪೂರಕವಾಗಿ ಆಚರಿಸುತ್ತಾಳೆ.

**ಅಥಃ ಗೌರೀ ಪೂಜನಮ್ :**

ಶ್ರೀ : ಅಥ ಕನ್ಯಾ ಸ್ನಾತಾ ಪರಿಹಿತೋಹತವಸ್ತ್ರಾ ಗೃಹಾಂತೆ : ಸೂತ್ರ ವೇಷ್ಟಿತೋ ಪಲ ಸಹಿತ ದೃಷದುಪರಿ ಹರಿದ್ರಾ ನಿರ್ಮಿತಾ ಗೌರೀಹರೌ ಸೌಭಾಗ್ಯಾದಿ ಕಾಮನಯಾಮಮ ಅಖಂಡ ಸೌಭಾಗ್ಯಾದಿ ಸಕಲೈಶ್ವರ್ಯ ಸಂಪತ್ಯರ್ಥಂ ಶ್ರೀ ಗೌರೀಹಕೌ ಪೂಜಯಿಷ್ಯ ||

ಇತಿ ಸಂಕಲ್ಪ ಪೂರ್ವಕಂ ಯಥಾ ವಿಭವಂ ಪೂಜಯಿತ್ವಾ ಪ್ರಾರ್ದಯೇತ್ || ತತ್ರ ಮಂತ್ರಃ || ಗೌರಿಹಕೌವಾ ಸತತಂ ನಮೋಸ್ತು ಭಕ್ತಪ್ರಯಾಭ್ಯಾಂ ಸುರಸೇವಿತಾಭ್ಯಾಂ || ಅಖಂಡ ಸೌಭಾಗ್ಯ ಯಶ : ಸುಪುತ್ರ ವಸೂಲಿ ಮೇದತ್ತಮನಾಪ್ರಯಶ್ಚ || ಇತಿ । ತತ ಇಂದ್ರಾಣೀಂಚ ತತ್ರೈವಾಕ್ಷತ ಪುಂಜೆ ಸಂಪೂಜ್ಯ ಪ್ರಾರ್ಥಯೇತ್ ||

ದೇವಿಂದ್ರಾಣಿ ನಮಸ್ತುಭ್ಯಂ ದೇವೆಂದು ಪ್ರಿಯ ಭಾಮಿನಿ || ವಿವಾಹೆ ಭಾಗ್ಯಮಾರೋಗ್ಯಂ ಪುತ್ರಲಾಭಂಚ ದೇಹಿಮೆ || ಧಾನ್ಯಂ ದೇಹಿ ಧನಂ ದೇಹಿ ಪಶೂನ್ ದೇಹೀಂದ್ರ ಸುಂದರಿ!! ಯಶೋ ದೇಹಿ ಸುಖಂ ದೇಹಿ ಸರ್ವ ಕಾರ್ಯಕರೀಭವ || ಇತಿ || ತತಃ ತತ್ರೈವ ಗೌರೀಂ ಪ್ರತಿ ಸೌಭಾಗ್ಯಾದಿ ಪ್ರಾರ್ಧಯ ಮಾನಾಲೆಷ್ಯೇತ್.

ವಿವಾಹ ಕನ್ಯವು ತನಗೆ ಸೌಭಾಗ್ಯವನ್ನು ಹಾಗೂ ಸುಮಂಗಲಿಯಾಗಿ ನನಗೆ ಆರ್ಶಿವರ್ಧಿಸು ಮತ್ತು ಸಂತಾನ ಭಾಗ್ಯವನ್ನು ನೀಡು ಎಂದು ಆ ದಿನ ಗೌರೀ ಪೂಜೆಯನ್ನು ಮಾಡಬೇಕು ಎನ್ನುವುದು ವೈಶ್ಯರ ನಂಬಿಕೆಯಾಗಿದೆ.

**ಕಾಶೀಯಾತ್ರೆ :**

ಹಿಂದಿನ ಕಾಲದಲ್ಲಿ ಐದು ವರ್ಷ ಇದ್ದಾಗಲೇ ಋಷಿ ಆಶ್ರಮದಲ್ಲಿ ವಿಧ್ಯೆ ಕಲಿಯಲು ಗಂಡು ಹುಡುಗರನ್ನು ಬಿಟ್ಟು ಋಷಿ ಮುನಿಗಳಿಗೆ ಒಪ್ಪಿಸುತ್ತಿದ್ದರು. ಈಗಿನ ಕಾಲದಲ್ಲಿ ಎಲ್ಲಾ ಶಾಲಾ ಕಾಲೇಜು ಇರುತ್ತವೆ. ಆಗಿನ ವಾತಾವರಣವೇ ಬೇರೆ ಆಗಿನ ಕಾಲದಲ್ಲಿ ಋಷಿ ಆಶ್ರಮದಲ್ಲಿ ಸೇರಿದ ಹುಡುಗರು ವಿಧ್ಯಾ ಪಾರಂಗತವಾಗಿ ಗುರುಗಳಿಂದ ಆಶೀರ್ವಾದ ಪಡೆದು ಪುಣ್ಯಕ್ಷೇತ್ರ ಕಾಶೀಗೆ ಹೋಗಿ ಅಲ್ಲಿ ಮಹಾನ್ ಪಂಡಿತರ ಹತ್ತಿರ ತನ್ನ ಸುಸಂಸ್ಕೃತ ವಿಧ್ಯೆ ಹೇಳಿ ತಮ್ಮ ಗುರುಗಳಿಗೆ ಹೆಮ್ಮೆಯ ಹೆಸರು ತರುತ್ತಿದ್ದ. ಹೀಗೆ ಹೋಗುವಾಗ ಯಾರೋ ಒಬ್ಬ ಮಹಾಮುನಿ

ಆ ವ್ಯಕ್ತಿಗೆ ಹೇಳುತ್ತಾರೆ ನಿನಗೆ ಕಾಶೀಯಾತ್ರೆ ಮಾಡಲು ಅಧಿಕಾರವಿಲ್ಲ ದಾಂಪತ್ಯ ಸಹಿತ ಹೋದರೆ ಕಾಶಿ ವಿಶ್ವನ ದರ್ಶನದಲ್ಲಿ ಪ್ರಗತಿ ಎಂದು ತಿಳಿಸಿದರು. ಹಾಗೆ ಕಾಶಿಗೆ ಹೋಗುವ ದಾರಿಯಲ್ಲಿ ತನ್ನ ಪದ್ದತಿ ಮೇರಿಗೆ ಯಗ್ನೋಪವಿತ್ರ ಧರಿಸಿ ವಿವಾಹ ಆಗ ನಡೆದು ದಂಪತಿ ಸಹಿತ ಕಾಶೀಯಾತ್ರೆ ಮಾಡುವುದು ವಾಡಿಕೆ ಇತ್ತು.

ಆದರೆ ಈಗಿನ ಕಾಲದ ಹಾಗೆ ಬಸ್ಸು, ರೈಲು, ಪ್ಲೇನು ಇರಲಿಲ್ಲ. ಆಗಿನ ಕಾಲದಲ್ಲಿ ಕಾಶೀಯಾತ್ರೆಗೆ ನಡೆದುಕೊಂಡೇ ಹೋಗಬೇಕಿತ್ತು.

ಕಾಶೀಯಾತ್ರೆಗೆ ಹೋಗುವವನು ಎಲ್ಲಾ ತಿಳಿದಿರಬೇಕು, ಹಿಂದಿನ ಕಾಲದಲ್ಲಿ ಋಷಿ ಆಶ್ರಮದಲ್ಲಿ ಈ ಕೆಳಗಿನ "ವಿದ್ಯೆ ಕಲಿಯಲೇ ಬೇಕು"

**1. ಅಧ್ಯಾತ್ಮಿಕ ಪ್ರಪಂಚದ ಬಗ್ಗೆ :**



1. ಪ್ರಾಣ
2. ಕರ್ಮೇಂದ್ರಿಯ
3. ಜ್ಞಾನೇಂದ್ರಿಯ
4. ಮನಸ್ಸು
5. ಬುದ್ದಿ
6. ಸುಖ
7. ದುಖಃ
8. ವೇದಗಳು



**2. ಚತುರ್ವಿಧ ಪುರುಷಾರ್ಥದ ಬಗ್ಗೆ :**

1. ಧರ್ಮ
2. ಅರ್ಥ
3. ಕಾಮ
4. ಮೋಕ್ಷ

**3. ದೇಹದಲ್ಲಿ ಚಲನವಲನದ ಬಗ್ಗೆ :**

1. ಸುಪ್ತ ಮನಸ್ಸು
2. ಜಾಗೃತಿ ಮನಸ್ಸು

**4. ದೇಹದಲ್ಲಿ ಕ್ರಿಯೆಯ ಬಗ್ಗೆ :**

1. ಸ್ವಾರ್ಥ
2. ಆಲೋಚನಾ ಶಕ್ತಿ
3. ನಿಸ್ವಾರ್ಥ ಶಕ್ತಿ
4. ಶಾಂತಿ ಕ್ರಿಯೆ ಶಕ್ತಿ
5. ದೇವತಾ ಭಕ್ತಿ ಶಕ್ತಿ

**5. ಶಾರೀರಕ ಕ್ರಿಯೆ :**

1. ನಿದ್ರೆ
2. ಆಹಾರ
3. ಮಲ ಮೂತ್ರ
4. ಲೈಂಗಿಕತೆ
5. ಸ್ವಚ್ಛತೆ

ಈ ಮೇಲಿನ ವಿಧ್ಯೆಗಳಲ್ಲಾ ಹಿಂದಿನ ಸಪ್ತ ಋಷಿಗಳಲ್ಲಿ ಕಲಿತು ವೇದ ಪುರಾಣಗಳ ಪಾಂಡಿತ್ಯನಾಗಿ, ಗುರುದಕ್ಷಿಣೆ ಸಲ್ಲಿಸಿ ಕಾಶೀಯಾತ್ರೆ ಮುಗಿಸಿ ದಂಪತಿ ಸಹಿತ ವಿಧ್ಯೆ ಪಾರಂಗತವಾಗಿ ತಂದೆ, ತಾಯಿ, ಗುರು ಹಿರಿಯರ ಸೇವೆ ಮಾಡುತ್ತಾ ಹೋಗುವುದೇ ಎಂದು ವೈಶ್ಯರಲ್ಲಿ ಇರುವ ನಂಬಿಕೆಯಾಗಿದೆ. ಇದು ವೈಶ್ಯರಲ್ಲಿ ವಿವಾಹದ ದಿನ ನಡೆಯುವ ಮುಖ್ಯವಾದ ಸಂಪ್ರದಾಯವಾಗಿದೆ.

**ವಧೂ ನಿರೀಕ್ಷಣೆ :**

ವರನು ಪೂರ್ವಾಭಿಮುಖವಾಗಿಯೂ ವಧುವು ಪಶ್ಚಿಮಾಭಿಮುಖವಾಗಿಯೂ ಧಾರಾ ಮಂಟಪದಲ್ಲಲಿ ನಿಂತಿರುತ್ತಾರೆ. ಅವರಿಬ್ಬರ ಬಲಗೈಯಲ್ಲಿ ಜೀರಿಗೆ ಬೆಲ್ಲವಿರುತ್ತದೆ. ಇಬ್ಬರ ಮಧ್ಯೆ

ತೆರೆಯು ಇರುತ್ತದೆ. ಇಂದ್ರಾದಿ ದೇವತೆಗಳು ಯೋಗಿಗಳು, ಮುನಿಗಳು, ಆರುಂಧತಿ ಮೊದಲಾದ ಮಹಾಸತಿಯರು ವೇಧ, ಶಾಸ್ತ್ರ, ಪುರಾಣ, ಇತಿಹಾಸ ಕಾವ್ಯಗಳು ಎಲ್ಲಾ ದೇಶಗಳು ಪುಣ್ಯ ಕ್ಷೇತ್ರಗಳು ಸಕಲ ನದಿಗಳು ಅರಣ್ಯಗಳು, ವನಸ್ಪತಿಗಳು ವಾದ್ಯಗಳು ಕಲ್ಪವೃಕ್ಷ ಕಾಮಧೇನು ತಿಥಿವಾರ ನಕ್ಷತ್ರ ಯೋಗ ಕರಣಗಳು ಸಪ್ತಕುಲ ಪರ್ವತಗಳು ದ್ವೀಪಗಳು ಸಮುದ್ರಗಳು, ಅಷ್ಟವಸುಗಳು, ದಿಗ್ಗಜಗಳು, ಅಷ್ಟೈಶ್ವರ್ಯಗಳು ನವಗ್ರಹಗಳು, ನವನಧಿಗಳು, ನವಮಣಿಗಳು, ದಶಾವತಾರಗಳು ಏಕಾದಶ ರುದ್ರರು, ದ್ವಾದಶ ದಿತ್ಯರು, ಹದಿನಾಲ್ಕು ಲೋಕಗಳು, ಹದಿನೈದು ಆಹುತಿಗಳು, ಹದಿನಾರು ಕಲೆಗಳು, ಹದಿನೆಂಟು ಪುರಾಣಗಳು ವಧೂ ವರರಿಗೆ ಶುಭವನ್ನುಂಟು ಮಾಡಲಿ ಎಂಬ ಚೂರ್ಣಿಕೆಯನ್ನು ವಧೂವರರಿಗೆ ಮಂಗಳವನ್ನುಂಟು ಮಾಡಲಿ ಎಂಬ ನಂಬಿಕೆ ವೈಶ್ಯರಲ್ಲಿ ಇದೆ. ಅದಕ್ಕಾಗಿ ವಧೂವರರು ಒಬ್ಬರಿಗೊಬ್ಬರು ತಲೆಯ ಮೇಲೆ ಜೇರಿಗೆ ಬೆಲ್ಲವನ್ನು ಇಡುತ್ತಾರೆ. ನಂತರ ತರೆಯನ್ನು ತೆಗೆಯುತ್ತಾರೆ.

**ಮುಹೂರ್ತ ನಿರ್ಣಯ :**

ವಿವಾಹ ವಿಧಿಯಲ್ಲಿ ಸಪ್ತಪದಿಯು ಪ್ರಧಾನವೆಂದು ಧರ್ಮ ಶಾಸ್ತ್ರಗಳ ಅಭಿಪ್ರಾಯವಾಗಿದೆ. ಇದಾದ ಮೇಲೆ ಮದುವೆಯು ಸ್ಥಿರವಾಗುತ್ತದೆ. ಪಾಣಿಗ್ರಹಣ, ಕನ್ಯಾಧಾನ, ಮಾಂಗಲ್ಯಧಾರಣೆ ಇವು ವೈಶ್ಯರ ಮದುವೆ ಸಂಪ್ರದಾಯದ ಅಂಗಗಳು.

ಒಂದೂವರೆ ಘಂಟೆ ಮೂರು ಮುಕ್ಕಾಲು ಘಳಿಗೆಯ ಕಾಲಕ್ಕೆ ಮುಹೂರ್ತವೆಂದು ಕರೆಯುತ್ತಾರೆ.

**ಕನ್ಯಾಧಾನ :**

ವಧೂ-ವರರು ಲಕ್ಷ್ಮೀನಾರಯಣನ ಸ್ವರೂಪವೆಂದು ವೈಶ್ಯರು ಭಾವಿಸುತ್ತಾರೆ. ಗಂಧ-ಪುಷ್ಪ ಮೊದಲಾದವುಗಳು ಅವರನ್ನು ಅಲಂಕರಿಸುತ್ತಾರೆ. ಧಾರಾಮಂಟಪದಲ್ಲಿ ವರನು ಪಶ್ಚಿಮಾಭಿಮುಖವಾಗಿಯೂ ವಧುವು ಪೂರ್ವಭಿಮುಖವಾಗಿಯೂ ನಿಂತಿರುತ್ತಾರೆ. ಕನ್ಯಾಧಾನಕ್ಕಾಗಿ ಬಂಧು ಬಳಗ ಮತ್ತು ಮಹಾಜನರು ಅಪ್ಪಣೆಯನ್ನು ಕರ್ತನು ಪಡೆಯುತ್ತಾನೆ. ವರನ ಎರಡು ಅಂಗೈಗಳ ಮೇಲೆ ಫಲ-ತಾಂಬೂಲ ಚಿನ್ನದ ನಾಣ್ಯವನ್ನು ಮತ್ತು ತುಲಸಿದಳವನ್ನು ಇಡುತ್ತಾರೆ. ಕನ್ಯಾಂ . . . ತ್ರಿವಾಚಕಂ" ಎಂಬ ಶ್ಲೋಕಗಳನ್ನು ಹೇಳುತ್ತಾ ಮೂರು ಸಾರಿ ಕಾಶಿ ತೀರ್ಥವನ್ನು ಧಾರೆ ಎರೆದು ಗೋತ್ರದಲ್ಲಿ ಹುಟ್ಟಿದ ಅವರ ಮರಿಮೊಮ್ಮಗ ಅವರ ಮೊಮ್ಮಗ ಅವರ ಮಗ ಹೆಸರುಳ್ಳವನಾದ ವರನಿಗೆ ಕೊಡುವನು ಎಂದು ಹೇಳುತ್ತಾನೆ.

ನಂತರ ಕನ್ಯಾಧಾತನು ಕನ್ಯೆಯನ್ನು ವರನಿಗೆ ದಾನ ಮಾಡುತ್ತಾನೆ. ಅಂದರೆ ಫಲ-ತಾಂಬೂಲದಿಂದ ಕೂಡಿದ ಕನ್ಯೆಯ ಬಲಗೈಯನ್ನು ವರನ ಕೈಗೆ ಕೊಡುತ್ತಾನೆ. ತಂದೆ ತಾಯಂದಿರು ಮಾತ್ರ ಕನ್ಯಾಧಾನಕ್ಕೆ ಅರ್ಹರು, ಅವರಿಲ್ಲದಿದ್ದಲ್ಲಿ ಅವರ ಪರವಾಗಿ ಕುಳಿತವರು ಕನ್ಯಾದಾನವನ್ನು ಮಾಡುತ್ತಾರೆ.

**ಕಂಕಣ ಧಾರಣೆ :**

ವೈಶ್ಯ ಸಮುದಾಯದ ವಧೂ-ವರರು ಗೃಹಸ್ಥಾಶ್ರಮದ ಕರ್ಮಗಳನ್ನು ಆಚರಿಸುತ್ತಾ ಸಂತಾನವನ್ನು ಪಡೆಯೋಣ ಎಂದು ಮೊದಲನೆಯ ಸಾರಿ ಸಂಕಲ್ಪವನ್ನು ಮಾಡುತ್ತಾರೆ. ಬಳಿಕ ವಧು-ವರರ ರಕ್ಷಣೆಗಾಗಿ ಪಾಣಿ ಗ್ರಹಣಾಂಗವಾದ ರಕ್ಷಾ ಬಂಧನವನ್ನು ಮಾಡುವೆನು ಎಂದು ಸಂಕಲ್ಪಮಾಡಿ ರಕ್ಷಾ ಬಂಧನದ ಪೂಜೆಯನ್ನು ವೈಶ್ಯ ಸಮುದಾಯದ ವಧು-ವರರು ಮಾಡುತ್ತಾರೆ.

'ವಿಶ್ವೇತ್ತಾತೇ' ಎಂಬ ಮಂತ್ರವನ್ನು ಪುರೋಹಿತರು ಹೇಳಿದ ಮೇಲೆ ವಧುವು ವರನ ಬಲಕೈಗೆ ಕಂಕಣವನ್ನು ಕಟ್ಟುತ್ತಾಳೆ. 'ಬೃಹತ್ಸಾಮ' ಎಂಬ ಮಂತ್ರವನ್ನು ಪುರೋಹಿತ ಹೇಳಿದ ಮೇಲೆ ವರನು ವಧುವಿನ ಎಡಗೈಗೆ ಕಂಕಣವನ್ನು ಕಟ್ಟುತ್ತಾನೆ.

ಸಾಮಾನ್ಯವಾಗಿ ಇದಕ್ಕೆ ಮೊದಲು ಒಮ್ಮೆ ನಿಶ್ಚತಾರ್ಥ ನೆಡೆದಿರುತ್ತದೆ ಅದು ಕೇವಲ ವರರ ಕೊಡು ತೆಗೆದುಕೊಳ್ಳುವುದರ ಬಗ್ಗೆ ಇರುತ್ತದೆ. ಆದರೆ ವೈಶ್ಯರಲ್ಲಿ ಮದುವೆಯ ಮೊದಲ ದಿನ ನಡೆಯುವ ನಿಶ್ಚಿತಾರ್ಥ ವಿಶೇಷವಾಗಿರುತ್ತದೆ. ಅಂದು ಸಂಜೆಯಿಂದ ಕಾರ್ಯಕ್ರಮಗಳು ಆರಂಭಗೊಂಡು ರಾತ್ರಿಯವರೆಗೆ ಕಾರ್ಯಕ್ರಮಗಳು ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಇದು ಸಾಮಾನ್ಯವಾಗಿ ವಧು ವರರ ನಡುವೆ ಒಂದು ಸಹಜತೆ ಹಾಗೂ ಪರಿಚಯ ಆರಂಭವಾಗುವುದು ಹಾಗೂ ವಧು ವರರು ಸೇರುವುದು ಸಾಂಪ್ರದಾಯಿಕವಾಗಿ ಅದೇ ಪ್ರತಮವಾಗಿರುತ್ತದೆ. ಅಂದಿನ ದಿನ ವಧುವು ಬಹಳ ಅಲಂಕೃತಗಳಾಗಿ ಎಲ್ಲಾ ಬಂಗಾರದ ಒಡವೆ ಆಭರಣಗಳನ್ನು ಧರಿಸಿ ಒಳ್ಳೆಯ ರೇಷ್ಮೆ ಸೀರೆಯನ್ನು ಹಾಕಿಕೊಂಡು ಅಲಂಕೃತಳಾಗಿರುತ್ತಾಳೆ. ಅದೇ ರೀತಿಯಾಗಿ ವರನು ಸಹ ಒಳ್ಳೆಯ ಒಟ್ಟೆಗಳನ್ನು ಅಥವಾ ಶೂಟು, ಬೂಟು ಧರಿಸಿಕೊಂಡು ನಿಶ್ಚಿತಾರ್ಥಕ್ಕೆ ಬರುತ್ತಾರೆ. ಪುರೋಹಿತರು ಅವರಿಬ್ಬರ ನಡುವೆ ಹೆಚ್ಚಿನ ಪರಿಚಯ ಬೆಳೆಯಲಿ ಎನ್ನು ಉದ್ದೇಶದಿಂದ ಅನೇಕ ಕಾರ್ಯಕ್ರಮಗಳನ್ನು ಮಾಡಿಸುತ್ತಾರೆ, ಆಟಗಳನ್ನು ಆಡಿಸುತ್ತಾರೆ. ಅಂದರೆ ಅಲ್ಲೇ ಕುಳಿತುಕೊಂಡು

ಆಡುವಂತಹ ಆಟಗಳಾಗಿರುತ್ತವೆ. ಇದೆಲ್ಲಾ ಆದನಂತರ ಅಲ್ಲಿ ಸೇರಿರುವ ಎಲ್ಲಾ ಬಂದು ಬಳಗದವರು ತಾವು ತಂದಿದ್ದ ಉಡುಗೊರೆಗಳನ್ನು ಕೊಟ್ಟು ಸಂತೋಷ ಪಡಿಸುತ್ತಾರೆ. ಅದೇ ವೇಳೆಯಲ್ಲಿ ವರನ ಕಡೆಯವರು ಮತ್ತು ವಧುವಿನ ಕಡೆಯವರು ತಾಂಬೂಲಗಳನ್ನು ಬದಲಾಯಿಸಿಕೊಳ್ಳುತ್ತಾರೆ. ಅಲ್ಲಿ ಸೇರಿರುವ ಎಲ್ಲಾ ಬಂಧುಗಳಿಗೆ ಪೋಟೋ ಅಥವಾ ವೀಡಿಯೋವನ್ನು ತೆಗೆಸುತ್ತಾರೆ. ಇದು ವೈಶ್ಯರು ನಿಶ್ಚಿತಾರ್ಥದ ವಿಶೇಷತೆ ಅಲ್ಲಿಗೆ ಇವರಲ್ಲಿ ಅರ್ಧ ಮದುವೆ ಆದ ಹಾಗೆ ಹಾಗುತ್ತದೆ. ಈ ನಿಶ್ಚಿತಾರ್ಥದ ನಂತರ ಎಲ್ಲರಿಗೂ ಊಟದ ವ್ಯವಸ್ಥೆ ಇರುತ್ತದೆ. ಇಂದು ಬಫೇ ಎಂತಲೂ ಇದಕ್ಕೆ ಕರೆಯುತ್ತಾರೆ ಅನೇಕ ತರಹದ ವಿಧವಿಧವಾದ ತಿಂಡಿ ತಿನಿಸುಗಳನ್ನು ಅಂದಿನ ದಿನ ಮಾಡಿರುತ್ತಾರೆ. ಅಂದಿನ ದಿನ ರಾತ್ರಿ ಕಲ್ಯಾಣ ಮಂಟಪವಾಗಲಿ ಅಥವಾ ವರನ ಮನೆಯವನ್ನಾಗಲಿ ಅನೇಕ ವಿದ್ಯುತ್ ದೀಪಗಳಿಂದ ಅಲಂಕರಿಸಿರುತ್ತಾರೆ.

**ಮಾಂಗಲ್ಯ ಧಾರಣೆ :**

ವಿವಾಹ ಮಂಟಪಕ್ಕೆ ಕನ್ಯೆಯನ್ನು ಅವಳ ಸೋದರ ಮಾವ ಅಂದರೆ ಅವರ ತಾಯಿಯ ತಮ್ಮ ಅಥವಾ ಅಣ್ಣ ಕನ್ಯೆಯನ್ನು ಬಿಡದಿ ಮನೆಯಿಂದ ಕರೆದುಕೊಂಡು ಬರುತ್ತಾನೆ. ಅಷ್ಟರಲ್ಲಿ ಪುರೋಹಿತರು ನಾನಲಂಕಾರಗಳಿಂದ ಹಲವಾರು ಪೂಜೆಗಳನ್ನು ಮಾಡುತ್ತಾ ಮಾಂಗಲ್ಯ ಮಂಟಪವನ್ನು ಸಿದ್ದಗೊಳಿಸಿರುತ್ತಾರೆ. ವಿವಾಹ ಕನ್ಯೆಯ ಅಲಂಕಾರವು ಸಾಮಾನ್ಯವಾಗಿ ಬಿಡದಿ ಮನೆಯಲ್ಲಿಯೇ ನಡೆಯುತ್ತದೆ. ಅಂದು ಧಾರೆಗೆಂದೇ ತಂದಿದ್ದ ಮದುವೆಯ ಸೀರೆಯನ್ನು ತೋಡಿಸುತ್ತಾರೆ. ಗುರು ಹಿರಿಯರ ಅನುಮತಿ ಪಡೆದು ವಿವಿಧ ಒಡವೆಗಳಿಂದ ಅವಳನ್ನು ಶೃಂಗರಿಸುತ್ತಾರೆ.

ಹೀಗೆ ಶೃಂಗರಿಸಿದ ಹೆಣ್ಣನ್ನು ಮನೆಯ ಅಥವಾ ಕಲ್ಯಾಣ ಮಂಟಪದ ಕನ್ಯೆಗೆಂದೇ ಕೊಟ್ಟಿದ್ದ ಕೊಠಡಿಯ ಒಳಗಿನಿಂದ ಧಾರಾಮಂಟಪಕ್ಕೆ ಸೋದರ ಮಾವ ಕರೆತರುತ್ತಾರೆ. ಗಂಡು ಆಗಲೇ ಮೆರವಣಿಗೆಯಿಂದ ಕಾಶೀಯಾತ್ರೆ ಮುಗಿಸಿಕೊಂಡು ಮರಳಿರುತ್ತಾನೆ. ಗಂಡು ಮಂಟಪದ ಹೊರಗಿನಿಂದ ಒಳಗೆ ಬಂದು ಮಂಟಪದಲ್ಲಿ ಹಸಿಮಣಿ ಏರುತ್ತಾನೆ. ಪುರೋಹಿತರು ಮಂತ್ರ ಜಫಿಸುತ್ತಾರೆ. ಹೆಣ್ಣಿನ ತಂದೆ ತಾಯಿ ಧಾರೆ ಎರೆದು ಕೊಡಲು ಸಿದ್ದರಾಗಿರುತ್ತಾರೆ. ಗಂಡಿನ ಎರಡು ಹಸ್ತಗಳ ಮೇಲೆ ಹೆಣ್ಣಿನ ಹಸ್ತವನ್ನು ಇರಿಸಿ ಅದರ ಮೇಲೆ ತಾಂಬೂಲವನ್ನು ವೀಳ್ಯದಲೆ, ತೆಂಗಿನಕಾಯಿ ಇಡುತ್ತಾರೆ. ಪುರೋಹಿತರು ಹೆಣ್ಣಿನ ತಂದೆ ತಾಯಿಗೆ ಹಾಲು–ನೀರು, ಬಿಡುವಂತೆ

ಸೂಚಿಸುತ್ತಾರೆ ಮತ್ತು ವರನ ಪಾದ ಪೂಜೆ ಮಾಡಿ ಕನ್ಯೆಯನ್ನು ಧಾರೆಯರೆಯುತ್ತಾರೆ. ನಿಗಧಿತ ವೇಳೆ ಬಂದಾಗ ಗಂಡಿನಿಂದ ಹೆಣ್ಣಿನ ಕೊರಳಿಗೆ ಮಾಂಗಲ್ಯವನ್ನು ಕಟ್ಟಿಸಿ ವಧೂವರರು ತೊಟ್ಟ ಊಡುಗೆಗೆ ಗಂಟು ಹಾಕಿ ಅವರನ್ನು ಒಂದು ಮಾಡುತ್ತಾರೆ. ಆಗಾಗಲೇ ಸೇರಿದ್ದ ಎಲ್ಲ ಸಂಬಂಧಿಕರಿಗೂ ಮಂತ್ರಕ್ಷತೆಯನ್ನು ನೀಡಿರುತ್ತಾರೆ. ಮಾಂಗಲ್ಯ ಆದ ತಕ್ಷಣವೇ ಗಂಡು ಹೆಣ್ಣಿನ ಮೇಲೆ ಅಕ್ಷತೆಯನ್ನು ಹಾಕುತ್ತಾರೆ. ಅನಂತರ ವಧೂವರರಿಗೆ ಸೂರ್ಯ ನಮಸ್ಕಾರ ಮಾಡಿಸಿ ಮತ್ತೆ ಮಂಟಪದ ಒಳಗೆ ಕರೆತಂದು ಕುರ್ಚಿಯ ಮೇಲೆ ಕೂರಿಸುತ್ತಾರೆ. ನಂತರ ವಧೂ ವರರು ಮದುವೆಯ ಉಡುಪನ್ನು ಬದಲಾಯಿಸಿಕೊಮಡು ಅಲಂಕರಿಸಿದ ಮಂಟಪಕ್ಕೆ ಬಂದು ಕೂಡುತ್ತಾರೆ. ಗಂಡು ಮದುವೆಗೆಂದೇ ತಂದಿದ್ದ ಶೂಟು ಬೂಟು ಧರಿಸಿಕೊಂಡಿರುತ್ತಾನೆ. ಹೆಣ್ಣು ರೇಷ್ಮೆ ಸೀರೆ ಇನ್ನೀತರ ಮೌಲ್ಯವಾದಂತಹ ಉಡುಪುಗಳನ್ನು ಧರಿಸಿಕೊಂಡು ಬರುತ್ತಾರೆ. ಈ ಸಮಯದಲ್ಲಿ ಮದುವೆಗೆ ಬಂದ ಎಲ್ಲರು ಅಕ್ಷತೆಯನ್ನು ಅವರ ಮೇಲೆ ಹಾಕಿ, ತಮ್ಮ ಕೈಯಿಂದ ಹಣವನ್ನು ಕೊಟ್ಟು ಅದಕ್ಕೆಂದೇ ಕುಳಿತ ಒಬ್ಬನಲ್ಲಿ ತಮ್ಮ ಹೆಸರು ಮತ್ತು ಹಣವನ್ನು ಬರೆಸುತ್ತಾರೆ. ಇದಕ್ಕೆ ಮುಯ್ಯಿ ಎಂದು ಕರೆಯುತ್ತಾರೆ.

ಮುಯ್ಯಿ ಮುಗಿದ ನಂತರ ಮದುಮಕ್ಕಳು ಧಾರೆ ಮಂಟಪದಿಂದ ಹೊರಗೆ ಬರುತ್ತಾರೆ. ಈ ಪ್ರತ್ಯೇಕಿಸಲಾದ ಸ್ಥಳ, ಕಾಲ ಮತ್ತು ಗಂಡು ಹೆಣ್ಣುಗಳು ಒಂದು ಹಂತದಲ್ಲಿ ಐಕ್ಯರಾಗುವುದಕ್ಕೆ ಮುಖ್ಯವಾದ ಎರಡು ಉದ್ದೇಶಗಳಿರಬಹುದು. ದಂಪತಿಗಳ ಭವಿಷ್ಯದಲ್ಲಿ ಒಳಿತಾಗಲಿ ಎಂಬ 'ಮಂಗಳದ ಕಲ್ಪನೆ' ಇದು ಅಲೌಕಿಕ ಸ್ವರೂಪದಲ್ಲಿಲ್ಲ, ಮುಂದಿನ ದಾಂಪತ್ಯದಲ್ಲಿ ಕಡೆಕಾಗದೆ ಇರಲಿ ಎಂಬ ಸದಾಶಯ ಹೊಸ ತಲೆಮಾರಿನ ಜೀವನ ಕ್ರಮಕ್ಕೆ ಸಂಬಂಧಿಸಿದೆ. ತಾಳಿಕಟ್ಟಿದ ನಂತರ ವಧೂವರರು ಹೆಂಡತಿ ಮತ್ತು ಗಂಡರಾಗಿ ಮಾರ್ಪಡುವುದರಿಂದ ವಂಶಾಭಿವೃದ್ಧಿಗೆ ಅನುಮತಿ ದೊರೆಯುತ್ತದೆ. ಪರೋಕ್ಷವಾಗಿ ಉತ್ತರಾಧಿಕಾರಿಯ ನೇಮಕಾತಿ ನಡೆಯುತ್ತದೆ. ಅಂದು ಅಲ್ಲಿ ನರೆದವರೆಲ್ಲಾ ಇದಕ್ಕೆ ಸಾಕ್ಷಿಗಳಾಗುತ್ತಾರೆ. ಇದು ಮಹೂರ್ತಕ್ಕೆ ಇರುವ ಆರ್ಥಿಕ ಮತ್ತು ಸಾಮಾಜಿಕ ಆಯಾಮವಾಗಿದೆ.

ಮಾಂಗಲ್ಯ ಮುಗಿದ ತಕ್ಷಣವೇ ಅಲ್ಲಿ ಬಂದವರಿಗೆ ಊಟವಿರುತ್ತದೆ. ಊಟ ಮುಗಿದ ಕ್ಷಣವೇ ಬಂದ ಅತಿಥಿಗಳೆಲ್ಲಾ ಅವರವರ ಊರಿಗೆ ಹಿಂತಿರುಗುತ್ತಾರೆ. ನಂತರ ಗಂಡು ಹೆಣ್ಣು ಎಲ್ಲಾ ಕಾರ್ಯಕ್ರಮಗಳು ಮುಗಿದ ಮೇಲೆ ಊಟ ಮಾಡುತ್ತಾರೆ. ಈ ವೈಶ್ಯರಲ್ಲಿ ಸಾಮಾನ್ಯವಾಗಿ ವಿವಾಹವು ಹೆಣ್ಣಿನ ಕಡೆಯವರೇ ನೆರವೇರಿಸಿರುತ್ತಾರೆ. ವೈಶ್ಯರಲ್ಲಿ ಪ್ರಸ್ಥವು ಮದುವೆಯ

ದಿನದಂದೇ ನಡೆಯುತ್ತದೆ. ಎಲ್ಲಾ ಸಮುದಾಯಗಳಲ್ಲಿ 16 ದಿವಸ ಇಲ್ಲವೇ ಮೂರು ತಿಂಗಳಲ್ಲಿಯೋ ನಡೆಯುತ್ತದೆ. ಅದರೆ ವೈಶ್ಯರಲ್ಲಿ ಮದುವೆಯ ದಿನವೇ ಪ್ರಸ್ಥಮಾಡಿ ಕೊಡುತ್ತಾರೆ. ಸಂಜೆಯವರಿಗೆ ಹೆಣ್ಣಿನ ಅಕ್ಕ ತಂಗಿಯರು, ಅಣ್ಣ, ತಮ್ಮಂದಿರು ಗಂಡಿನ ಜೊತೆಗೂಡಿ ಕಾಲ ಕಳೆಯುತ್ತಾರೆ. ಜೊತೆಗೆ ಮದುವೆಯ ಹೆಣ್ಣುಕೂಡ ಇರುತ್ತಾಳೆ.

**ಅಕ್ಷತಾ ರೋಪಣೆ :**

ವಧುವು ಪೂರ್ವಾಭಿಮುಖವಾಗಿಯೂ ವರನು ಪಶ್ಚಿಮಾಭಿಮುಖವಾಗಿಯೂ ನಿಂತಿರುತ್ತಾರೆ. ವರನು ತನ್ನ ಎರಡು ಅಂಗೈಗಳನ್ನು ಹಾಲಿನಲ್ಲಿ ಅಡ್ಡಿ ವಧುವಿನ ಎರಡು ಅಂಗೈಗಳಿಗೂ ವರನು ಸವರುತ್ತಾನೆ. ಅನಂತರ ಹೆಂಡತಿಯ ಬೊಗಸೆಯಲ್ಲಿ ಅಕ್ಕಿಯನ್ನು ಹಾಕುತ್ತಾನೆ. ವರನು ಕೂಡ ಬೊಗಸೆಯಲ್ಲಿ ಅಕ್ಕಿಯನ್ನು ಹಾಕಿ ಕೊಳ್ಳುತ್ತಾನೆ. ಹೆಂಡತಿಯ ಬೊಗಸೆಯ ಮೇಲೆ ಗಂಡನು ಬೊಗಸೆಯ ನೀಡುತ್ತಾನೆ. ಅದರ ಮೇಲೆ ನೀರಿನ ಕಲಶವನ್ನಿಡುತ್ತಾರೆ.

ಪುಣ್ಯವು ಹೆಚ್ಚಲಿ, ಶಾಂತಿಯಾಗಲಿ, ಪುಷ್ಟಿಯಾಗಲಿ, ಸಂತೋಷವಾಗಲಿ, ಏಳಿಗೆಯಾಗಲಿ, ವಿಘ್ನಗಳಾಗದಿರಲಿ, ಆಯಸ್ಸು ಹೆಚ್ಚಲಿ, ಆರೋಗ್ಯವುಂಟಾಗಲು ಮಂಗಳವಾಗಲಿ, ಕಾರ್ಯವು ಪೂರ್ಣವಾಗಲಿ ದಂಪತಿಗಳ ಜನ್ಮ ನಕ್ಷತ್ರಗಳು ಗ್ರಹಗಳು ಮತ್ತು ದೇವತೆಗಳು ಶಾಂತಿಯನ್ನುಂಟು ಮಾಡಲಿ, ದಂಪತಿಗಳಿಗೆ ಸುಖ ಸಂತೋಷವುಂಟಾಗಲಿ, ಸಂತಾನವಾಗುವುದರಿಂದ ಸಮಧಾನವಾಗಲಿ ಎಂದು ವೈಶ್ಯ ಸಮುದಾಯದ ಹಿರಿಯರು ಆಶೀರ್ವಧಿಸುತ್ತಾರೆ.

ಬಳಿಕ ಕಲಶವನ್ನು ತೆಗೆದು ವರನ ಬೊಗಸೆಯಲ್ಲಿರುವ ಅಕ್ಕಿಯನ್ನು ಮೊದಲು ವಧುವಿನ ತಲೆಯ ಮೇಲೆ ಅನಂತರ ವಧುವು ವರನ ತಲೆಯ ಮೇಲೂ ಹಾಕುತ್ತಾರೆ. ಎರಡನೇಯ ಸಾರಿ ವಧುವು ಬೊಗಸೆಯಲ್ಲಿ ತೆಗೆದುಕೊಂಡು ಅಕ್ಕಿಯನ್ನು ಮೊದಲು ವರನ ತಲೆಯ ಮೇಲೂ ಆಮೇಲೆ ವರನು ವಧುವಿನ ತಲೆಯ ಮೇಲೂ ಹಾಕುತ್ತಾರೆ. ಮೂರನೆಯ ಸಾರಿ ವರನ ಬೊಗಸೆಯಲ್ಲಿ ತೆಗೆದುಕೊಂಡ ಅಕ್ಕಿಯನ್ನು ಮೊದಲು ವಧುವಿನ ತಲೆಯ ಮೇಲೂ ಆಮೇಲೆ ವಧು ವರನ ತಲೆಯ ಮೇಲೂ ಹಾಕುತ್ತಾರೆ. ನಾಲ್ಕನೆಯ ಸಾರಿ ವಧೂ ವರರ ಬೊಗಸೆಯಲ್ಲಿ ತೆಗೆದುಕೊಂಡ ಅಕ್ಕಿಯನ್ನು ಒಟ್ಟಿಗೆ ಒಬ್ಬರ ತಲೆಯ ಮೇಲೆ ಮತ್ತೊಬ್ಬರು ಹಾಕುತ್ತಾರೆ.

**ಸಭಾ ಪೂಜೆ :**

ವೈಶ್ಯ ಸಮುದಾಯದವರು ಅಕ್ಷತಾರೋಪಣೆಯಾದ ಮೇಲೆ ನವ-ದಂಪತಿಗಳು ಹಸೆಯ ಮೇಲೆ ಕುಳಿತು ಕೊಳ್ಳುತ್ತಾರೆ. ಅವರಿಬ್ಬರ ಸೆರಗನ್ನು ಗಂಟು ಹಾಕುತ್ತಾರೆ. ವಧೂ ವರರ ತಂದೆ ತಾಯಿಗಳು ಕೂಡ ಹಸೆಯ ಮಣಿಯ ಮೇಲೆ ಕುಳಿತು ಕೊಳ್ಳುತ್ತಾರೆ. ಅವರಿಗೆ ಫಲ ತಾಂಬೂಲವನ್ನು ಕೊಟ್ಟು ವೈಶ್ಯ ಮುತ್ತೈದೆಯರು ಆರತಿ ಬೆಳಗುವರು, ನವ ದಂಪತಿಗಳನ್ನು ಬಿಟ್ಟು ಉಳಿದವರು ಹಸೆಯನ್ನು ಬಿಟ್ಟು ಬೇರೆ ಕಡೆ ಹೋಗುತ್ತಾರೆ.

**ಸಪ್ತಪದಿ :**

ವರನು ಪ್ರಾಣಾಯಾಮ ಮಾಡಿ ಆಗತಾನೆ ಮದುವೆಯಾದ ವಧುವಿನೊಂದಿಗೆ ವಿವಾಹ ಪ್ರಧಾನ ಹೋಮವನ್ನು ಮಾಡುವೆನು ಎಂದು ಸಂಕಲ್ಪ ಮಾಡುತ್ತಾನೆ. ಅಗ್ನಿಯನ್ನು ಸ್ಥಾಪಿಸಿದ ಮೇಲೆ ವರನು ನಿಂತು ವಧುವಿನ ತಲೆಯ ಮೇಲೆ ಅಂಗೈಯನ್ನುಡುತ್ತಾನೆ. ಆಗ ಪುರೋಹಿತರು "ಸೋಮ ; ಪ್ರಥಮ ; ವಧುವೇ ನಿನ್ನನ್ನು ಮೊದಲು ಸೋಮನು ಮದುವೆಯಾದನು ಬಳಿಕ ಗಂಧರ್ವನು ಮದುವೆಯಾದನು. ಮೂರನೆಯ ಗಂಡ ಅಗ್ನಿ ನಾಲ್ಕನೆಯ ಗಂಡ ಮನುಷ್ಯ, ಸೋಮನು ನಿನ್ನನ್ನು ಗಂಧರ್ವನಿಗೆ ಕೊಟ್ಟನು. ಗಂಧರ್ವನು ಅಗ್ನಿಗೆ ಕೊಟ್ಟನು, ಸಂತಾನವನ್ನು ಪಡೆಯುವದಕ್ಕಾಗಿ ಅಗ್ನಿಯು ನನಗೆ ಕೊಟ್ಟಿರುವನು" ಎಂಬ ಮಂತ್ರವನ್ನು ಹೇಳುತ್ತಾರೆ.

ಅಗ್ನಿಯು ಪಶ್ಚಿಮದಲ್ಲಿ ಸಾಣೆಕಲ್ಲು - ಅತ್ನಯ ಎಡಭಾಗದಲ್ಲಿ ಗೌರಿಯನ್ನು ಇಡುತ್ತಾರೆ. ಅಗ್ನಿಗೆ ಈಶಾನ್ಯದಲ್ಲಿ ಅಕ್ಕಿಯ ಏಳು ರಾಶಿಗಳನ್ನು ಮಾಡಿರುತ್ತಾರೆ. ವರನು ತನ್ನ ಬಲ ಅಂಗೈಯಿಂದ ವಧುವಿನ ಬಲ ಅಂಗೈಯನ್ನು ಹಿಡಿದು 'ಗೃಭ್ಣಾಮಿ' ಐಶ್ವರ್ಯ ಸಂತಾನಾಧಿ ಸೌಭಾಗ್ಯ - ಪ್ರಾಪ್ತಿಗಾಗಿ ಪರಮಾತ್ಮನನ್ನು ಪ್ರಾರ್ಥಿಸುತ್ತಾ ವರನು ವಧುವಿನ ಕೈಯನ್ನು ಹಿಡಿಯುತ್ತಾನೆ. ನಂತರ ಅಕ್ಕಿಯ ರಾಶಿಗಳ ಹತ್ತಿರ ವಧು ವರರನ್ನು ಕರೆದುಕೊಂಡು ಬರುತ್ತಾರೆ. ಅಕ್ಕಿಯ ಏಳು ರಾಶಿಗಳ ಮೇಲೆ ಅವಳನ್ನು ಪೂರ್ವಾಭೀಮುಖವಾಗಿಯೋ ಉತ್ತಾರಾಭಿಮುಖವಾಗಿಯೋ ನಡೆಸುತ್ತಾನೆ.

| | | |
|---|---|---|
| ಅವಳು ಮೊದಲನೆಯ ಹೆಜ್ಜೆಯನ್ನು ಇಟ್ಟಾಗ | – | ಇಷ ಏಕಪದೀಭವ ಗೃಹ ರಕ್ಷಕಳಾಗ ಎಂದು. |
| ಎರಡನೆಯ ಹೆಜ್ಜೆಯನ್ನು ಇಟ್ಟಾಗ | – | ಊರ್ಜೆ ದ್ವಿಪದೀಭವ ಶಕ್ತಿವಂತಳಾಗು |
| ಮೂರನೆಯ ಹೆಜ್ಜೆಯನ್ನು ಇಟ್ಟಾಗ | – | ವ್ರತಾಯ ತ್ರಿಪದೀಭವ ನನ್ನ ನಿಯಮಗಳೇ ನಿನ್ನ ನಿಯಮಗಳಾಗಲೀ |
| ನಾಲ್ಕನೆಯ ಹೆಜ್ಜೆಯನ್ನು ಇಟ್ಟಾಗ | – | ಮಾಯೋಭವಾಯ ಚತುಷ್ಪದೀಭವ– ಆರೋಗ್ಯ ಸಾಧಕಳಾಗ' ಎಂದು |
| ಐದನೆಯ ಹೆಜ್ಜೆಯನ್ನು ಇಟ್ಟಾಗ | – | ಪ್ರಜಾಭ್ಯ : ಪಂಚಪದೀಭವ ಮಕ್ಕಳನ್ನು ಪಡೆ ಎಂದು |
| ಆರನೆಯ ಹೆಜ್ಜೆಯನ್ನು ಇಟ್ಟಾಗ | – | ಋತುಭ್ಯ : ಷಟ್‌ಪದೀಭವ ಋತು ನಿಯಮಗಳನ್ನು ಕಾಪಾಡು' ಎಂದು |
| ಏಳನೇಯ ಹೆಜ್ಜೆಯನ್ನು ಇಟ್ಟಾಗ | – | 'ಸಖಾ ಸಪ್ತಪದೀಭವ, ನನ್ನ ಬಾಳ ಗೆಳತಿಯಾಗ' ಎಂದು |

ಸಖಾಸಪ್ತ ಪದಾ ಭವ – ವರಾನನೇ ನೀನು ನನ್ನೊಂದಿಗೆ ಏಳು ಹೆಜ್ಜೆ ಇಟ್ಟಿರುವುದರಿಂದ ಈ ಪರಮ ಮಿತ್ತಳಾದೆ ನಮ್ಮಿಬ್ಬರ ಸ್ನೇಹ – ವಿಯೋಗವು ಎಂದೆಂದಿಗೂ ಅಗಲದಿರಲಿ ನಾವಿಬ್ಬರು ಹೊಂದಿಕೊಂಡು ಸತ್ಕಾರ್ಮಗಳನ್ನು ಮಾಡಿ ಒಳ್ಳೆಯನ್ನು ಕೀರ್ತಿಯನ್ನು ಹೊಂದಿ ಕೂಡಿ ಬಾಳಬೇಕು, ನಮ್ಮ ಅಂತರಂಗ ಮತ್ತು ಬಹಿರಂಗ ವ್ಯಾಪಾರಗಳಲ್ಲಿ ಸಾಮರಸ್ಯವುಂಟಾಗಿ ಒಳ್ಳೆಯ ಸಂತಾನವನ್ನು ಪಡೆಯೋಣ ಎಂದು ವೈಶ್ಯ ಸಮುದಾಯದಲ್ಲಿ ಈ ಸಪ್ತಪದಿಯ ಉದ್ದೇಶವಾಗಿದೆ ಎಂದು ಅವರ ನಂಬಿಕೆ.

**ವಿವಾಹ ಹೋಮ :**

ವೈಶ್ಯರಲ್ಲಿ ಹೋಮಕ್ಕೆ ಆಧ್ಯತೆ ನೀಡಿದ್ದಾರೆ. ಮಾಂಗಲ್ಯಧಾರಣೆ ಮುಗಿದ ನಂತರ ನೂತನ ವಧುವರರು ಹೋಮ ಪೂಜೆಗೆ ಕೊಡುತ್ತಾರೆ. ಮೊದಲು ಹೋಮಕ್ಕೆ ಅಗ್ನಿ ಕುಂಡವನ್ನು ಪುರೋಹಿತರು ಶಾಸ್ತ್ರೋತ್ತರವಾಗಿ ಇಟ್ಟಿಗೆಯ ಮೂಲಕ ನಿರ್ಮಾಣ ಮಾಡುತ್ತಾರೆ. ಈ ಅಗ್ನಿ ಕುಂಡದಲ್ಲಿ ಹೋಮಕ್ಕೆ ಗಂಧದ ಕಟ್ಟಿಗೆ ಮತ್ತು ತುಪ್ಪದ ಮೂಲಕ್ಕೆ ಈ ಪೂಜೆಯನ್ನು ಮಾಡುತ್ತಾರೆ. ವಧು ವರರು ಸಪ್ತಪದಿ ಯನ್ನು ತಿರುಗುತ್ತಾರೆ. ಈ ಪೂಜೆಯ ಉದ್ದೇಶ ಈ

ಮಂಗಳ ಕಾರ್ಯದಲ್ಲಿ ಶಾಂತಿ ಲಭಿಸಲಿ ಹಾಗೂ ಮುಂದಿನ ಜೀವನದಲ್ಲಿ ಯಶಸ್ಸು ದೊರಕಲಿ ಎಂದು ಈ ಪೂಜೆಯನ್ನು ಮಾಡಿಸುತ್ತಾರೆ.

ಈ ಹೋಮ ವಿಶಿಷ್ಟವಾದದ್ದಾಗಿರುತ್ತದೆ. ಮದುವೆ ದಿನ ಇದನ್ನು ಮಾಡುತ್ತಾರೆ. ಇದಕ್ಕೆ ಆದಂತಹ ಶ್ಲೋಕಗಳನ್ನು ನೋಡಬಹುದು. ವರೋ ವೇದ್ಯಾಂ ಪ್ರಾಜ್ಮುಖ ಉಪದಿಶ್ಯ ಸ್ವದಕ್ಷಿಣತೋ ನಿಯಮಿತ ವಾಚಂ ವಧೂಂಚ, ಉಪ ವಿಶ್ವದವರಾಚಮ್ಯ ಪ್ರಾಣನಾಯಮ್ಯ ದೇಶಕಾತಾ ಸಂಕೀರ್ತ್ಯ ಪ್ರತಿ ಗೃಹಿತಾಯಾ ಮಸ್ಯಾಂ ವದ್ವಾಂ ಭಾರ್ಯಾತ್ವಸಿದ್ದಯೆ ಗೃಹ್ಯಾಗ್ನಿ ಸಿದ್ದಯ ಚ, ವಿವಾಹ, ಹೋಮಂ ಕರೀಷ್ಮಿ ||

ತದಂಗ ಸ್ಥಂಡಿಲೋಲ್ಲೇಖನಾದಿ ಯೋಜಕ ನಾಮಾಗ್ನಿ ಪ್ರತಿಷ್ಠಾಪನಾಂತಂ ಕೃತ್ವಾ ಅಗ್ನೇಃ ಪ್ರತ್ಯಗ್ದಷ್ಯದಂ ಸೋಪಲಾಂ ಪ್ರತಿಷ್ಠಾಪ್ಯ ಪ್ರಾಗುದೀಚ್ಯಾಂ ಧಾನ್ಯರಾಶರುಪರಿ ಉದಕೆ, ಪೂರ್ಣ ಕುಂಭಂ ನಿಧಾಯ ತಲ ಪಲ್ಲವೈರಪಿಧಾಯ್ಯ ಗಂಧೆ ಪುಷ್ಪೈ ರಲಂಕೃತ್ಯ ಉದಗಗ್ನೆ ಪ್ರಾಕ್ಪಂಸ್ಥಂ ಸಪ್ತತಂಡುಲ ರಾಶೀನುಪಕಲ್ಪ್ಯ ನಮಿದ್ವಯ ಮಾದಾಯ ದೇಶಕಾಲೌ ಸಂಕೀರ್ತ್ಯ ಕ್ರಿಯಮಾಣೆ ವಿವಾಹ ಹೋಮೇ ದೇವತಾ ಪರಿಗ್ರಹಾರ್ಥ ಮಿತ್ಯಾದ್ಯಾಕ್ಷಾರಾವಾ ಜ್ಯೇನ || ಅತ್ರ ಪ್ರಧಾನಮ ತ್ರಿರಗ್ನೆಂ ಪವಮಾಸಿಂ ಸಕೃದಗ್ನಿಂ ಪ್ರಜಾಪತಿಂ ಚಾಜ್ಯೆನ ಆರ್ಯಮಾಗ್ನಿಂ ವರೋನಾಗ್ನಿಂ ಪೂಷಗ್ನಿಂ ಪ್ರಜಾಪತಿಂ ಚ ಲಾಜದ್ರವ್ಯಣ ಶಷೇಣ ಸ್ವಿಷ್ಟಿಕೃತಂ ಇತ್ಯಾದಿ ಷಟ್ ಪಾತ್ರಾ ಸಾಧನಾಂತ ಕೃತ್ವಾ ಪಾತ್ರ ಪಶ್ಚಿಮತೋ ಲಾಜಸೋರ್ಪಮಾ ಸಾದ್ಯ ಅಜ್ಯಾಧಿಶ್ರಯಣಾಂತಂ ಕೃತ್ವಜಂ ಲಾಜೈಃ ಸಹ ತ್ರಿಃ ಪರ್ಯಾಗ್ನಿ ಕೃತ್ವಾ ಅಜ್ಯೋತ್ಪವ ಸಿ ಕೃತೆ ಲಾಜಾನ್ ತ್ರಿಃ ಪ್ರೋಕ್ಷ್ಯೇ ಬರ್ಹರಾಸ್ತ ರಣಾದ್ಯಾಷಾರ ಹೋಮಂತಂ ಕೃತ್ವಾ || ಅಗ್ನೇ ಪೋಮೌ ಚಕ್ಷುಕ್ಷೀ ನಸ್ತಃ || ಅತ್ರಪ್ರದಾನ ಹೋಮ : ಅಗ್ನ ಅಯೂಂಕ್ಷೀಲೆ ತಿಸೃಣಾ ಶತಂ ವೈಖಾನಸಾ ಋಷಿಯ: ಅಗ್ನೀ ಪವಮಾನೋ ದೇವತಾ ಗಾಯತ್ರೀ ಛಂದ: ವಿವಾಹ ಪ್ರಧಾನಾಜ್ಯ ಹೋಮೇ ವಿನಿಯೋಗ. ಪಿತ್ರಾ ಪ್ರತ್ತಾಮಾದಾಯ ನಿಷ್ಕಾಮತಿ || ಯದ್ಯೈಷಿ ಅಥರ್ವಣೋನುಷ್ಟುಪ್ ಲಿಂಗೋಕ್ತಾ ನಿಷ್ಕ್ರಮಣೆ ವಿನಿಯೋಗೆ.

ಓಂ ಯದ್ಯೈಷಿ ಮನಸಾ ದೂರಂ ದಿಶೋನು ಪವಮಾನೊವಾ || ಹಿರಣ್ಯ ಪರ್ಣೋ ಪೈಕರ್ಣ ಸತ್ವಾ ಮನ್‌ಮನಸಾಂ ಕರೋತ್ವಸಾ || ಅಸಾವಿತ್ಯತ್ರ ಕುಮಾರ್ಯ: ಸಂಭುಧ್ಯಂತಂ

ನಾಮಗ್ರಹಣಮ್ ವಿಷ್ಕ್ಯಮಣ ಪ್ರಭುತ್ಯೇ ಕೋದೃಡ ಪುರುಷ ಉದಕುಂಭಂ ಸ್ಕಂದೆ ಕೃತ್ವಾ ಅಗ್ನೇರ್ದಕ್ಷಿಣತೋ ವಾಗ್ಯತೆಃ ಸ್ಥಿರೋಭವತ್ಯಭಿಷೀಕ ಪರ್ಯಂತಂ ॥ ಉತ್ತರತೊವಾ ॥ ಅಥ ಏನೌ ವೇದಿಸಮೀಪಲ ಗತಾ ವಧೂವರೌ ಪ್ರೀಕ್ಷಯಲೆ ಪಿತಾ "ಪರಸ್ಪರು ಸಮೀಕ್ಷೇಥಾ" ಮಿಲೆ ॥ ತತಸ್ತಾ ವಧೂವರೂ ಪರಸ್ಪರಲಿ ಸಮೀಕ್ಷಣಂ ಕುರುತಃ ॥ ಸತ್ರ ಮಂತ್ರಾಃ ॥ ಓಂ ಅಘೋರಚಕ್ಷಂ ಅಪತ್ಯಘೇದಿ ಶಿವಾ ಪಶುಭ್ಯಃ ಸುಮನಾಃ ಸುವರ್ಚ್ಚಾಃ ॥ ಈ ರೀತಿಯಾಗಿ ಪುರೋಹಿತರು ವಧು ವರವಿನ ಜೊತೆ ಹೋಮ ಪೂಜೆಯನ್ನು ಮಾಡುತ್ತಾರೆ.

**ಕಾರ್ಯ :**

ವೈಶ್ಯ ಸಮುದಾಯದಲ್ಲಿ ಈ ಕಾರ್ಯ ಮದುವೆಯೇ ದಿನವೇ ನಡೆಯುತ್ತದೆ. ಅದೇ ದಿನ ಸಂಜೆ ಹುಡುಗಿಯ ತಂಗಿ ಕೋನೆಯಲ್ಲಿ ಹಾಸಿಗೆ ಸಿದ್ದ ಪಡಿಸಿ ಬರುತ್ತಾಳೆ. ಆ ಕೋಣೆಯನ್ನು ಅನೇಕ ಹೂವಿನ ಅಲಂಕಾರಗಳಿಂದ ಸಿದ್ದ ಪಡಿಸಿರುತ್ತಾರೆ. ಅಲ್ಲಿ ಕುಡಿಯಲು ನೀರು ಇಟ್ಟಿರುತ್ತಾರೆ ಹಾಗೂ ಪ್ರಸ್ಥದ ಕೋಣಿಗೆ ಎಂದೇ ಹಲವಾರು ತಿಂಡಿ ತಿನಿಸುಗಳನ್ನು ಸಿದ್ದ ಪಡಿಸಿ ಆ ಕೋಣೆಯಲ್ಲಿ ಇಚ್ಚಿರುತ್ತಾರೆ. ಹೆಣ್ಣು ಹಂಪಲಗಳನ್ನು ಇಟ್ಟಿರುತ್ತಾರೆ. ಊಟವಾದ ಮೇಲೆ ಗಂಡು ಕೋಣೆಗೆ ಹೋಗಿ ಮಲಗಿಕೊಳ್ಳುತ್ತಾನೆ. ಇದಾದ ನಂತರ ಹುಡುಗಿಯನ್ನು ಜೊತೆಗಿದ್ದವರು ಕೋಣಿಗೆ ಹೋಗುವಂತೆ ಸೂಚಿಸುತ್ತಾರೆ. ಹೆಣ್ಣು ನಾಚುತ್ತಾಳೆ. ಅವಳ ಕೈ ಹಿಡಿದು ಗಂಡು ಇರುವ ಕೋಣೆಗೆ ತಳ್ಳಿ ಬಾಗಿಲು ಹಾಕಿಕೊಳ್ಳುತ್ತಾರೆ. ಈ ಕಾರ್ಯ ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿಯೇ ನಡೆಯುತ್ತದೆ. ಕೆಲವರು ಇದನ್ನು ಗಂಡಿನ ಮನೆಯಲ್ಲಿ ಮಾಡುತ್ತಾರೆ. ಇಲ್ಲ ಹಾಸಿ ಕೊಡುವವಳು ಗಂಡಿನ ಅಕ್ಕ ಆಗಿರುತ್ತಾಳೆ. ಹೆಣ್ಣು ಕೋಣೆಗೆ ಹೋಗುವಾಗ ಅವಳು ಒಂದು ಲೋಟ ಹಾಲು ಹಿಡಿದಿರುತ್ತಾಳೆ. ಅಂದಿನಿಂದ ಒಬ್ಬರನೊಬ್ಬರು ಅರಿತುಕೊಂಡು ಜೀವನ ಸಾಗಿಸುತ್ತಾರೆ. ಗಂಡು ಕೆಲವು ದಿನಗಳು ಹೆಣ್ಣಿನ ಮನೆಯಲ್ಲಿಯೇ ಇದ್ದು ತನ್ನ ಮನೆಗೆ ಹೆಂಡತಿಯನ್ನು ಕರೆದುಕೊಮಡು ಬರುತ್ತಾನೆ.

**ಗೃಹ ಪ್ರವೇಶ :**

ಗಂಡು ಹೆಣ್ಣಿನ ಮನೆಯಲ್ಲಿ ಎಲ್ಲಾ ಕಾರ್ಯಗಳನ್ನು ಮುಗಿಸಿಕೊಂಡು ಕೆಲವು ದಿನಗಳ ನಂತರ ಮದುವೆಗೆ ಹೆಂಡತಿಯನ್ನು ಮನೆ ತುಂಬಿಸಿಕೊಳ್ಳಲು ಬರುತ್ತಾನೆ. ಅಂದಿನ ದಿನ ಗಮಡಿನ ಮನೆಯವರು ಬಾಗಿಲ ಪಕ್ಕಕ್ಕೆ ದೀಪ ಹಚ್ಚಿಟ್ಟು. ಪ್ರಧಾನ ಬಾಗಿಲ ಮಧ್ಯದಲ್ಲಿ ಬಂದು ಸಿದ್ದಕ್ಕಿ ತುಂಬಿಟ್ಟು, ಬಗಿಲ ಎರಡು ಬಿದಿಗೆ ಎಲೆ ಅಡಿಕೆ ಇಟ್ಟಿರುತ್ತಾರೆ. ವಧೂ ವರರು ಬಂದ ಕೂಡಲೇ

ಅವರಿಗೆ ದೃಷ್ಟಿ ತೆಗೆದು ಚಲ್ಲುತ್ತಾರೆ. ಹೆಣ್ಣು ಮನೆಯನ್ನು ಪ್ರವೇಶ ಮಾಡುವಾಗ ಬಲಗಾಲ ಮುಂದಿಟ್ಟು ಒಳಗೆ ಪ್ರವೇಶಿಸಬೇಕು ಮತ್ತು ಪ್ರಧಾನ ಬಾಗಲಲ್ಲಿ ತುಂಬಿಟ್ಟ ಅಕ್ಕಿಯನ್ನು ಕಾಲಿನಿಂದ ತೂರಿ ಒಳಗೆ ಹೋಗಬೇಕು. ಇದರ ರೀತಿ ಮಾರು ಸಾರಿ ನಡೆಯುತ್ತದೆ. ಹೆಣ್ಣಿಗೆ ಮುತ್ತೈದೆಯರು ಮದುಮಗ ಮತ್ತು ಮೊದಲಗಿತ್ತಿರಿಗೆ ಆರತಿ ಮಾಡಿ ಮನೆ ತುಂಬಿಸಿಕೊಳ್ಳುತ್ತಾರೆ.

**ಹೊಸಲಿಗೆ ಮಳೆ ಹೊಡೆಯುವುದು :**

ಮೊದಲಗಿತ್ತಿ ಪ್ರಪ್ರಥವಮವಾಗಿ ಮನೆಯನ್ನು ಪ್ರವೇಶ ಆ ವೇಳೆಯಲ್ಲಿ ತನ್ನ ಬಲಗಾಲನ್ನು ಇಟ್ಟು ಮನೆಯನ್ನು ಪ್ರವೇಶ ಮಾಡಬೇಕಾಗುತ್ತದೆ. ಹಾಗೆ ಮಾಡುವಾಗ ಬಲಭಾಗದ ಪಾದದ ಹೆಬ್ಬೆರಳಿನ ಸಂದಿಯಲ್ಲಿ ಹೊಸಲಿಗೆ ಮಳೆಯನ್ನು ತನ್ನ ಗಂಡ ಹೊಡೆಯುತ್ತಾನೆ. ಅಂದಿನಿಂದ ಆ ಹೆಣ್ಣಿಗೆ ಮನೆಯಲ್ಲಿ ಅಧಿಕಾರ ಸಿಕ್ಕಿತು. ಕೆಲವು ಸಂದರ್ಭದಲ್ಲಿ ಅತ್ತೆ ಸೊಸೆಯಲ್ಲಿ ಜಗಳಕಾದರೆ, ಸೊಸೆ ಹೀಗೆ ಹೇಳುತ್ತಾಳೆ. "ನಾನೇನು ನಿನ್ನ ಮಗನ ಜೊತೆ ಒಡಿ ಬಂದಿಲ್ಲ, ಹೊಸಲಿಗೆ ಮಳೆ ಬಿಡಿಸಿಕೊಂಡು ಬಂದೀನಿ.

**ಮಡಿಲಕ್ಕಿ ಅಥವಾ ಉಡಿಹಕ್ಕಿ :**

ಮಡಿಲಕ್ಕಿಗೆ ಅನೇಕ ಹೆಸರುಗಳಿವೆ. ಮಡಿಲು ತುಂಬುವುದು, ಸುವಾಸಿನಿಯರ ಪೂಜೆ ಅನೇಕೆ ರೀತಿ ಹೇಳುತ್ತಾರೆ. ಆದರೆ ಇದರ ಅರ್ಥ ಮಾತ್ರ ಮಡಿಲಕ್ಕಿ ತುಂಬುವುದು ಈ ಶಾಸ್ತ್ರ ವೈಶ್ಯರು ಕಲ್ಯಾಣ ಮಂಟಪದಲ್ಲಿ ಮದುವೆಯ ದಿನದಿಂದ ಪ್ರಾರಂಭವಾಗುತ್ತದೆ. ಹೆಣ್ಣಿಗೆ ಮೊದಲು ಮಡಿಲು ತುಂಬುವುದು. ತಾಯಿ ವೈಶ್ಯರಿಗೆ ಇದನ್ನು ಮೊದಲು ತಾಯಿ ಜಗನ್ಮಾತೆಯೆ ಪ್ರಕೃತಿಯನ್ನು ತುಂಬುವುದರ ಮೂಲಕ ಮಕ್ಕಳಿಗೂ ಮಡಿಲು ತುಂಬುವುದರ ಪಾಠವನ್ನು ಕಲಿಸಿದ್ದಾಳೆ.

ಮಡಿಲಕ್ಕಿಗೆ ಬೇಕಾಗುವ ಸಾಮಾನುಗಳು ಅಕ್ಕಿ, ಒಣಜೊಬ್ಬರಿ, ಆಡಿಕೆ, ಅರಿಶಿಣಕೊನೆ, ಮಂಗಳ ದ್ರವ್ಯಗಳು ಮತ್ತು ಚಕ್ಕುಲಿ, ಪಾಕದ ಕಡ್ಲೆ, ಹಾಲುಸಕ್ಕರೆ, ತಾಂಬೂಲ ವೀಳ್ಯದ ಎಲೆ, ಬಾಳೆಹಣ್ಣು ಮತ್ತು ಮಂಗಳ ದ್ರವ್ಯಗಳಾದ ಅರಿಶಿಣ ಕುಂಕುಮ.

<u>ಅಕ್ಕಿ</u> : ಅಕ್ಕಿ ಇದು ಅನ್ನ ಬ್ರಹ್ಮ ಎಂದು ಯಾಕೆ ಹೇಳ್ತೀವಿ ಅಂದರೆ ಭತ್ತವು ತುಂಬಿದ ಮೇಲೆ ಬಾಗಿ ಭಗವಂತನಿಗೆ ನಾನು ನಿಮ್ಮಿಂದ ತುಂಬಿದ್ದೇನೆ ಎಂದು ವಂದಿಸುತ್ತದೆ. ಆಂದರೆ ಭತ್ತದ

ತೆನೆಗಳು ಭಾಗುತ್ತವೆ. ಬೇರೆ ಯಾವುವು ಇದರಂತೆ ಭಾಗುವುದಿಲ್ಲ. ಆದ್ದರಿಂದ ಅಕ್ಕಿ ಅನ್ನ ಬ್ರಹ್ಮ ಮತ್ತು ಅಕ್ಕಿ ಚಂದ್ರಗ್ರಹವಿದ್ದಂತೆ ಚಂದ್ರ ಪೂರ್ಣತೆ, ಶಾಂತತೆಯ ಸಂಕೇತ, ಇವನು ಚಂಚಲತೆಯನ್ನು ಬಿಟ್ಟು ಪೂರ್ಣ ಸ್ಥಿತಿಯನ್ನು ತಲುಪಲಿ, ಶಾಂತಿಯಿಂದ ಇರಲಿ, ಆನಂದವಾಗಲಿ ಎಂಬ ಕಾರಣಕ್ಕೆ ಅಕ್ಕಿಯನ್ನು ಇಡುತ್ತೇವೆ. ಅಂದರೆ ಇಲ್ಲಿ ಅಕ್ಕಿ ಪರಿಪೂರ್ಣತೆಯ ಸಂಕೇತ ಹಾಗೂ ಇದು ಬೀಜೋತ್ಪತ್ತ ಅಂದರೆ ಎಲ್ಲಾ ಶುಭಕಾರ್ಯಗಳಲ್ಲೂ ಅಕ್ಕಿಯನ್ನು ಬಳಸುತ್ತಾರೆ. ಮಡಿಲಕ್ಕಿಗೆ ಪಂಚತತ್ವಗಳ ಸಂಕೇತವಾಗಿ 5 ಪಾವು ಅಕ್ಕಿಗಳನ್ನು ವೈಶ್ಯರು ಮಡಿಲು ತುಂಬುತ್ತಾರೆ.

**ಬೆಲ್ಲ** : ಬೆಲ್ಲ ಶಿವೆಯ ಸ್ವರೂಪ ಆದ್ದರಿಂದ ಬೆಲ್ಲ ಇಡುತ್ತಾರೆ. ಬೆಲ್ಲದಂತೆ ನಮ್ಮ ಮನಸ್ಸು ಹಾಗೂ ಅಂತರಂಗವು ಶುದ್ಧವಾಗಿ ಸಿಹಿಯಾಗಿರಲಿ ಎಂದು ಅರ್ಥ.

**ಕಾಯಿ** : ಕಾಯಿ ಮೂರು ಕಣ್ಣುಗಳ ಮುಕ್ಕಣನ ಸ್ವರೂಪ ಹಾಗು ಕಾಯಿಯ ಒಳಗೆ ನಿರ್ಮಲವಾದ ಗಂಗಾ ಜಲ ಇದೆ. ಇದು ಸ್ವಚ್ಛತೆಯ ಸಂಕೇತ, ಇಲ್ಲಿ ತೆಂಗಿನಕಾಯಿ ಶಿವನು. ಬೆಲ್ಲವು ಶಿವೆಯು ಆಗಿ ಶಿವಶಕ್ತಿಯರ ಸಮ್ಮಿಲನ ಆದ್ದರಿಂದ ಮಗಳ ಜೀವನವು ಸಿಹಿಯಾದ ಬೆಲ್ಲದಂತಿರಲಿ ಎಂದು ಬೆಲ್ಲವನ್ನೂ ಸಹ ಇಡುತ್ತಾರೆ.

**ಬಾಳೆಹಣ್ಣು** : ಇದು ಶುಭ್ರತೆಯ ಸಂಕೇತ. ಇದು ಕದಳೀ ಫಲವಾದ್ದರೀದಮ ಹೆಣ್ಣು ಮಕ್ಕಳಿಗೆ ಉಡಿ ತುಂಬಲು ಬಾಳೆಹಣ್ಣುಗಳನ್ನು ಇವರು ಬಳಸುತ್ತಾರೆ.

**ಅರಿಶಿನ ಕೊನೆ** : ಅರಿಶಿನ ಕೊನೆ ಅಂದರೆ ಶುಭದ ಸಂಕೇತ, ಅರಿಶಿಣವನ್ನು ಮುಖಕ್ಕೆ ಅಚ್ಚಿ ಕುಂಕುಮದ ಒಟ್ಟು ಇಟ್ಟುಕೊಂಡರೆ ಎಂತಹವರಿಗೂ ಪೂಜ್ಯಭಾವನೆ ಬರುತ್ತದೆ. ಅರಿಶಿಣವನ್ನು ಅನೇಕ ರೀತಿಯಲ್ಲಿ ಉಪಯೋಗಿಸಬಹುದು.

**ಸೀರೆ ಕುಪ್ಪಸ** : ಸೀರೆ ಕುಪ್ಪಸ ಕೊಟ್ಟು ಮಡಿಲು ತುಂಬಿದರೆ ಹೊಸ ಸೀರೆ ಕುಪ್ಪಸ ತೊಟ್ಟ ಹೆಣ್ಣು ಮಕ್ಕಳು ತವರು ಚನ್ನಾಗಿರಲಿ ಎಂದು ಹಾರೈಸುತ್ತಾರೆ. ಒಟ್ಟಿನಲ್ಲಿ ಮಡಿಲಕ್ಕಿ ಕಟ್ಟುವುದು ವೈಶ್ಯರಿಗೆ ಮೆನಗೆ ಬಂದ ಹೆಣ್ಣು ಮತ್ತು ಮನೆಯಿಂದ ಹೊರ ಹೋದ ಹೆಣ್ಣು ಮಕ್ಕಳಿಗೂ ಆನಂದ ಸಂತೃಪ್ತಿ

ಸಿಗಲಿ ಅವರು ತವರು ಮನೆಯಲ್ಲಿ ಎಲ್ಲರೂ ಚೆನ್ನಾಗಿರಲಿ ತಮದೆ ತಾಯಿ ಅಣ್ಣ ತಮ್ಮಂದಿರು ಚೆನ್ನಾಗಿರಲಿ ಎಂದು ಹಾರೈಸುತ್ತಾರೆ.

ಸರ್ವಮಂಗಳ ಮಾಂಗಲ್ಯ ಶಿವೆ ಸರ್ವಾರ್ತ ಸಾಧಿಕೇ ॥
ಶರಣ್ಯ ತ್ರಂಬಕೇ ದೇವಿ ನಾರಾಯಣಿ ನಮೋಸ್ತುತ್ತೆ ॥

ಎಂಬಂತೆ ಯಾವಾಗಲೂ ಸರ್ವದಲ್ಲಿಯೂ ಪರ್ವರಲ್ಲಿಯೂ ಮಂಗಳವಾಗಿದ್ದು, ವೈಶ್ಯರನ್ನು ಸದಾ ಹರಸುತ್ತಿರುವ ಜಗನ್ಮಾತೆ, ಎಲ್ಲರಿಗೂ ಮಂಗಳವನ್ನುಂಟುಮಾಡಲಿ ಇದ್ದವರಿಗೆ ಕಟ್ಟುವುದು ಹೆಚ್ಚಲ್ಲ ಇಲ್ಲದವರಿಗೆ, ಬಡವರಿಗೆ, ತಾಯಿ ಇಲ್ಲದವರಿಗೆ ಕಟ್ಟಿರುವುದಿಲ್ಲ, ಅಂತಹ ಸಂದರ್ಭದಲ್ಲಿ ಶ್ರೀ ವಾಸವಿ ಸಂಘದವರು ಹೆಣ್ಣು ಮಕ್ಕಳಿಗೆ ಮಡಿಲಕ್ಕಿ ಕಟ್ಟುತ್ತಾರೆ. ಶ್ರೀ ವಾಸವಿ ದೇವಸ್ಥಾನದಲ್ಲಿ ದೇವರ ಸನ್ನಿಧಿಯಲ್ಲಿ ಮಡಿಲಕ್ಕಿ ಕಟ್ಟಿಸಿಕೊಳ್ಳುವುದು ಒಂದು ಸೌಭಾಗ್ಯ.

ನಮಸ್ತೆ ವಾಸವಿ ದೇವಿ ನಮಸ್ತೇ ವಿಶ್ವ ವಾಸವಿ ।
ನಮಸ್ತೇ ವೃತ ಸಂಬದ್ದೇ ಕಾಮತ್ರೇತೇ ನಮೋ ನಮಃ ॥

**ಅಗ್ನೇಯ ಸ್ಥಾಲೀಪಾಕ :**

ಸಾಯಂಕಾಲ ಹೋಮ ಮಾಡಲಿರುವ ಅಗ್ನಿಯ ಮೇಲೆ ಪತ್ನಿಯು ಅನ್ನವನ್ನು ಮಾಡುತ್ತಾಳೆ. ಆ ಅನ್ನಕ್ಕೆ ತುಪ್ಪವನ್ನು ಹಾಕಿ ದಂಪತಿಗಳು ಹೋಮ ಮಾಡುತ್ತಾರೆ.

# ನಂಬಿಕೆ ಮತ್ತು ಶಕುನಗಳು

ವೈಶ್ಯರು ಹಿಂದೆ ತಮ್ಮ ನಿತ್ಯ ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಶಕುನ ನೋಡಿ ಕೆಲಸ ಮಾಡುತ್ತಿದ್ದರೆಂಬುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ. ಇತ್ತೀಚೆಗೆ ಶಕುನ ನೋಡುವುದನ್ನು ಮಂಗಲ ಕಾರ್ಯದಲ್ಲಿ ಮಾತ್ರ ಸೀಮಿತಗಳಿಸಿಕೊಂಡಿದ್ದಾರೆ, ಮಂಗಲ ಕಾರ್ಯಕ್ಕೆ ಸಂಬಂಧಿಸಿದ ಶಕುನಗಳನ್ನು ನೋಡಿದರೆ ಬಹುಪಾಲು ಶಕುನಗಳು 'ಮದುವೆ' ಸಂದರ್ಭಕ್ಕೆ ಮೀಸಲಿದ್ದಂತಿವೆ. ಇವರು ಜಾತಕ ಮತ್ತು ಹೆಣ್ಣು ನೋಡುವ ಸಂದರ್ಭದಿಂದ ಹಿಡಿದು ಮದುವೆ ಮುಗಿದು ಗಂಡು ಹೆಣ್ಣು ಹಳಬರಾಗುವವರೆಗೂ ಶಕುನಗಳನ್ನು ಗಮನಿಸುತ್ತಾರೆ.

**1. ಶುಭ ಶಕುನಗಳು :**

- ಹಣ್ಣು, ಹೂ, ಅಡ್ಡಬಂದರೆ ಒಳ್ಳೆಯದು
- ನರಿ ಮುಂಗಸಿ ಮುಖ ತೋರಿಸಿದರೆ ಒಳ್ಳೆಯದು
- ಸಾಂಬಾರ ಕಾಗೆ ಅಡ್ಡ ಬಂದರೆ ಒಳ್ಳೆಯದು
- ತುಂಬಿದ ಕೊಡ ನೋಡಿದರೆ ಒಳ್ಳೆಯದು.

**2. ಅಶುಭ ಶಕುನಗಳು :**

- ನಾಗರಹಾವು, ಬೆಕ್ಕು, ಅಡ್ಡ ಬಂದರೆ ಅಪಶಕುನ
- ವಿಧವೆ, ಒಂಟಿ ಬ್ರಾಹ್ಮಣ, ಅಡ್ಡಬಂದರೆ ಅಪಶಕುನ
- ಅಂಗ (ಒಂದು ಜಾತಿಯ ಹಕ್ಕಿ) ಬಲದಿಂದ ಎಡಕ್ಕೆ ಹೋದರೆ
- ಕಾಗೆ ಬಲದಿಂದ ಎಡಕ್ಕೆ ಹೋದರೆ
- ಹೆಣ್ಣಿನ ಮನೆಗೆ ಹೊರಡಬೇಕು ಎನ್ನುವಾಗ ಹಲ್ಲಿ ಲೊಚಗುಟ್ಟಿದರೆ ಅಶುಭ
- ಕಟ್ಟಿಗೆ ಹೊರೆ ಅಡ್ಡ ಬರಬಾರದು
- ಹೊಸ ಮಡಿಕೆ ಹೊತ್ತವನು ಅಡ್ಡ ಬರಬಾರದು
- ಕ್ಷೌರಿಕ ಮತ್ತು ಗಾಣಿಗ ಜಾತಿಯವರು ಅಡ್ಡ ಬರಬಾದು
- ಗುದ್ದಲಿ ಸಲಿಕೆ ಎದುರಾಗಬಾರದು
- ಹೆಣ್ಣಿನ ಮನೆಗೆ ಹೋದಾಗ ಹೆಣ್ಣು ಕಸಬರಕೆ ಹಿಡಿದಿರಬಾರದು.

ಈ ವಿಷಯಗಳನ್ನು ಗಮನಿಸಿದರೆ ಮುಖ್ಯವಾಗಿ ಪ್ರಾಣಿ, ಮನುಷ್ಯ, ಸಸ್ಯ ಮತ್ತು ಇತರ ವಸ್ತುಗಳು ಶಕುನ ಸೂಚಕಗಳಾಗಿರುವುದು ಕಂಡು ಬರುತ್ತದೆ. ಮೃಗ ಪಕ್ಷಿ ಜಂತುಗಳಾದಿಗಳ ದೈಹಿಕ ಕ್ರಿಯೆ ಪ್ರತಿಕ್ರಿಯಗಳಲ್ಲಿ ಶಕುನ ಫಲ ಕಂಡುಕೊಳ್ಳುವುದು ವಿಲಕ್ಷಣವಾಗಿ ತೋರುತ್ತದೆ. ಹಕ್ಕಿಗಳು ಹಾರುವುದು. ಹಲ್ಲಿ ಲೊಚಗುಟ್ಟುವುದು, ನರಿ ಬೆಕ್ಕು, ಹಾವು ಇತ್ಯಾಧಿಗಳು ದಾರಿಯನ್ನು ಅಚೆ ಈಚೆ ದಾಟುವುದು ಆಯಾಯ ಪ್ರಾಣಿಗಳ ಸ್ವಭಾವ ಸಿದ್ದವಾದ ನಡವಳಿಗಳು. ಈ ಪ್ರಾಣಿ, ಪಕ್ಷಿ ಸ್ವಭಾವವನ್ನೇ ಶುಭ ಆಶುಭ ಎಂದು ತಿಳಿಯುವುದು ತೀರ ವಿಚಿತ್ರವಾಗಿ ಕಾಣುತ್ತದೆ. ಇನ್ನೊಂದು ಗಮನಿಸಬೇಕಾದ ಅಂಶ ಎಂದರೆ ವಾಸ್ತವಿಕ ಬದುಕಿನಲ್ಲಿ ಯಾವ ವಸ್ತು ಮತ್ತು ವ್ಯಕ್ತಿಗಳನ್ನು ಗೌರವ ಭಾವನೆಯಿಂದ ಕಾಣುವುದಿಲ್ಲವೂ! ಅವು ಅಲ್ಲಿ ಶಕುನಗಳಾಗಿ ಕಾಣುತ್ತವೆ. ತುಂಬಿದ ಕೊಡದ ಮೇಲು ನೋಟದ ಅರ್ಥವಲಯ ತೀರ ಸಾಮಾನ್ಯವಾಗಿ ಕಂಡರೂ ಜನಪದರು ಅದನ್ನು ಹಗರುವಾಗಿ ಕಾಣುವುದಿಲ್ಲ, ಅದರ ಒಳ ಅರ್ಥ ಸದಾ ದವಸ ದಾನ್ಯ ಹಣ, ಸಂಪತ್ತಿನಿಂದ ಮನೆ ಮನ ತುಂಬಿರಲಿ ಎನ್ನುವುದೇ ಆಗಿರುತ್ತದೆ. ಇದು ನಿಜಕ್ಕೂ ಅರ್ಥಪೂರ್ಣವಾಗಿ ಕಂಡು ಬರುತ್ತದೆ.

**3. ನಂಬಿಕೆಗಳು :**

- ಮೂಲಗಣ್ಣಿನ ಹುಡುಗಿಯರು ಅದೃಷ್ಟವಂತರು
- ಹೆಣ್ಣುನೋಡಲು ಹೊರಟಾಗ ದಾರಿಯುದ್ದಕ್ಕೂ ಶುಭ ಸೂಚನೆಗಳೇ ಕಂಡು ಬಂದರೆ ಆ ಸಂಬಂಧದಿಂದ ಒಳ್ಳೆಯದುಂಟು
- ಹುಡುಗನಿಗೆ ತಲೆಯಲ್ಲಿ ಎರಡು ಸುಳಿ ಇದ್ದರೆ ಎರಡು ಮಂದಿ ಹೆಂಡಂದಿರು ಆಗುತ್ತಾರೆ.
- ಹೆಣ್ಣು ನೋಡಲು ಹೋದಾಗ ಹೆಣ್ಣಿನ ಮನೆಬಾಗಿಲು ಹಾಕಿರಬಾರದು.
- ಮದುವೆ ಚಪ್ಪರದಲ್ಲಿ ತೂಗಿ ಹಾಕಿದ ತಳಿರು ತೋರಣಗಳು ಅವಿವಾಹಿತರ ತಲೆಗೆ ತಾಗಿದರೆ ಅವರಿಗೂ ಬೇಗನೆ ಮದುವೆ ಯೋಗ ಕೂಡಿ ಬರುತ್ತದೆ.
- ಮದುವೆಯಾಗದೆ ಸತ್ತ ಯುವಕ ಅಥವಾ ಯುವತಿ ದೆವ್ವ ಅಥವಾ ಮೋಹಿನಿಯರಾಗಿ ಉಳಿದವರನ್ನು ಕಾಡುತ್ತಾರೆ.

ನಂಬಿಕೆಗಳ ಹಿಂದೆ ಸದುದ್ದೇಶಗಳಿರುತ್ತವೆ. ಉದಾ : ಮೂಲಗಣ್ಣಿನ ಹುಡುಗಿ ಅದೃಷ್ಟವಂತೆ ಸುಂದರವಾಗಿರುವ ಹೆಣ್ಣೊಬ್ಬಳನ್ನು ಮದುವೆ ಮಾಡುವಾಗ ಆಯ್ಕೆ ಕಷ್ಟ ಆಗಬಾರದು. ಅದೇ

ಎಲ್ಲಾ ಅಂಗಾಂಶಗಳು ಸರಿ ಇದ್ದು ಕೆಲವು ಅಂಗಗಳು ವಕ್ರವಾಗಿದ್ದರೆ ಅಂತಹ ಹೆಣ್ಣನ್ನು ಮದುವೆ ಮಾಡಿಕೊಳ್ಳಲು ಜನ ಮುಂದೆ ಬರುವುದಿಲ್ಲ. ಈ ಕಾರಣಕ್ಕಾಗಿ ಒಂದು ಹುಡುಗಿಯ ಮದುವೆ ನದಿಯದೆ ಹೋಗಬಹುದು ಎಂಬ ಕಾರಣಕ್ಕಾಗಿ ಈ ನಂಬಿಕೆ ರೂಪು ಗೊಂಡಿರಬೇಕೆಂದು ತಿಳಿಯಬಹುದು. ಆನಪದರ ಎಲ್ಲಾ ನಂಬಿಕೆಗಳ ಹಿಂದೆಯೂ ಒಂದು ಮಹತ್ವದ ಅಂಶ ಅಡಗಿರುತ್ತದೆ. ಮೇಲು ನೋಟಕ್ಕೆ ನಂಬಿಕೆಗಳು ಹುರುಳಿಲ್ಲದಂತೆ ತೋರಿದರೂ ಆ ನಂಬಿಕೆಗಳು ಹೊರಗೆಡುವ ಒಂದು ವಾಸ್ತವ ಸತ್ಯವನ್ನು ಯಾರು ಅಲ್ಲಗಳೆಯುವಂತಿಲ್ಲ. ಈ ಮಾತನ್ನು ಉದಾಹರಣೆಯೊಂದಿಗೆ ಸ್ಪಷ್ಟಪಡಿಸಿಕೊಳ್ಳಬಹುದು ಹೆಣ್ಣಿನ ಕಡೆಯವರೆಗೆ ಯಾವುದೇ ಒಂದು ಕುಟುಂಬದೊಡನೆ ಬಾಂಧವ್ಯ ಬೆಳೆಸಲು ಇಷ್ಟ ವಿಲ್ಲದಿದ್ದಾಗ ಅವರು ತಮ್ಮ ಮನೆಬಾಗಿಲು ಮುಟ್ಟುವ ರೂಪದಲ್ಲಿ ಪ್ರಕಟಿಸಬಹುದು. ಮುಖಾ ಮುಖಿಯಾಗಿ ಈ ಸಂಬಂಧ ಇಷ್ಟ ಇಲ್ಲ ಎಂದು ಹೇಳಿ ವಾತಾವರಣವನ್ನು ಕಹಿಗೊಳಿಸಿಕೊಳ್ಳುವುದರ ಬದಲು ಮೌನವಾಗಿಯೇ ಪ್ರತಿಕ್ರಿಯೆ ಅರ್ಥಪೂರ್ಣವಾಗಿ ತೋರುತ್ತದೆ.

ತಳಿರು ತೋರಣಗಳನ್ನು ಮಂಗಲ ಕಾರ್ಯಗಳಲ್ಲಿ ಸಾಮಾನ್ಯವಾಗಿ ಕಾಣುವ ದೃಷ್ಟವಾಗಿದೆ. ಹದಿ ಹರೆಯದವರ ಜೀವನ ಚಿಗುರಿನಂತೆ ದಟ್ಟವಾಗಿ ಚಿಗುರಲಿ ಎನ್ನುವ ಸತ್ಯ ಇಲ್ಲಿ ಅಡಗಿದೆ. ಮದುವೆಯಾಗದ ಗಮಡು ಹೆಣ್ಣುಗಳ ತಲೆಯ ಮೇಲೆ ಇಂತಹ ತಳಿರು ತೋರಣಗಳು ತಾಗುವುದರಿಂದ ಅವರಿಗೂ ಕಂಕಣ ಬಲ ಕೂಡಿ ಬರುತ್ತದೆ ಎಂದು ನಂಬುವುದು ಅವಾಸ್ತವಿಕವಾಗಿ ಕಂಡರೂ. ಸದಾ ಮಂಗಲ ಕಾರ್ಯಗಳು ನಡೆಯಲಿ ಎನ್ನುವ ಸದುದ್ದೇಶ ಅವರಲ್ಲಲಿ ಅಡಗಿರಬಹುದು.

# ಸಮಾರೋಪ

ಪ್ರಸ್ತುತ ಅಧ್ಯಯನದಲ್ಲಿ ಸಂಡೂರು ಪರಿಸರದಲ್ಲಿ ವಾಸಿಸುವ ವೈಶ್ಯರ ಮದುವೆ ಸಂಪ್ರದಾಯಗಳನ್ನು ಸಂಗ್ರಹಿಸಿ ಅವರು ಜಾತಕ ಸಾಲಾವಳಿ ಕೂಡಿಕೊಂಡು ಹೆಣ್ಣು ಆಯ್ಕೆ ಮಾಡಿ 'ಮದುವೆ' ಬದುಕಿನ ಅವಿಭಾಜ್ಯ ಅಂಗ ಎಂದು ಅಧ್ಯಯನದಲ್ಲಿ ಹಿಂದೆ ಅವರಲ್ಲಿ ಪ್ರಚಲಿತವಿದ್ದ ಮದುವೆಯ ಬಗೆಗಳನ್ನು ಪರಿಚಯಿಸಲಾಗಿದೆ. ಇವರು ಮದುವೆಯಲ್ಲಿ ಅನುಸಿರಿಸುವ ನಂಬಿಕೆ ಮತ್ತು ಶಕುನಗಳ ಮಾಹಿತಿಕೊಟ್ಟು ಅಗತ್ಯವೆನಿಸುವಲ್ಲಿ ವಿವರಿಸಲಾಗಿದೆ. ಅಧ್ಯಯನದ ಹಿನ್ನಲೆಯಾಗಿ ವೈಶ್ಯರ ಸಮುದಾಯದ ಭೌಗೋಳಿಕ ಪರಿಸರ, ಪೌರಾಣಿಕ ಹಿನ್ನಲೆ, ವೈಶ್ಯ ಪರಂಪರೆ ವೈಶ್ಯರ ಪೂರ್ವ ಪರಿಚಯ ಮತ್ತು ಅವರ ಕುಟುಂಬ ಪದ್ದತಿ ಇವುಗಳನ್ನು ಪರಿಚಯಿಸಲಾಗಿದೆ.

ಪ್ರಸ್ತುತ ವೈಶ್ಯರ ಮದುವೆ ಸಂಪ್ರದಾಯಗಳನ್ನು ಒಂದು ಸೀಮಿತ ಅವಧಿಯಲ್ಲಿ ಅಧ್ಯಯನ ಮಾಡಬೇಕಾದ್ದರಿಂದ, ಮದುವೆಯಲ್ಲಿ ನಡೆಸುವ ಕೆಲವು ಆಚರಣೆಗಳು ಕೈ ಬಿಟ್ಟಿರಬಹುದು ಉಳಿದಂತೆ ಸಂಪ್ರದಾಯಗಳನ್ನು ಅವರ ಮದುವೆಯಲ್ಲಿ ಭಾಗವಹಿಸಿ ಸೂಕ್ಷ್ಮವಾಗಿ ನೋಡಿ ಸಂಗ್ರಹಿಸಲಾಗಿದೆ.

ಮದುವೆಯಲ್ಲಿ ನೋಡಿದ ಮತ್ತು ಅಲ್ಲಿ ಸಂಗ್ರಹಿಸಿದ ವಿವರಗಳನ್ನು ಲಿಖಿತ ರೂಪದಲ್ಲಿ ತರಲು ತುಂಬ ಸಮಯ ಬೇಕಾಯಿತು. ಅನಂತರ ಅದನ್ನು ಒಂದು ಕ್ರಮದಲ್ಲಿ ಜೋಡಿಸಿ ಅಗ್ಯವಿದ್ದಲ್ಲಿ ವಿಶ್ಲೇಷಣೆ ಮಾಡಲಾಯಿತು.

ವೈಶ್ಯರ ಮದುವೆ ವಿಧಾನವು ಆ ಸಮುದಾಯದ ಸಾಂಸ್ಕೃತಿಕ ದೃಷ್ಠಿಕೋನವನ್ನು ಸಾಂಕೇತಿಕವಾಗಿ, ಸಮರ್ಥವಾಗಿ ಈ ಕೆಳಗಿನಂತೆ ಸಂಗ್ರಹಿಸಬಹುದು.

1. ಪುನರಾವರ್ತನೆಗೊಳ್ಳುವ ಮದುವೆ ಸಂಬಂಧಗಳೇ ವೈಶ್ಯರ ಇತಿಹಾಸದ ಮುಖ್ಯ ಅಂಶವನ್ನು ನಿರ್ಧರಿಸಿದೆ.
2. ಅಣ್ಣ ತಂಗಿಯರ ನಡುವೆ ಮದುವೆ ನೆಡೆಯಬಾರದು, ಪ್ರಧಾನ ನಿಷೇಧ ಇವರಲ್ಲಿದೆ.

3. ಹುಟ್ಟಿನಿಂದ ಸಾಯುವಲ್ಲಲಿವರೆಗೆ ಮತ್ತು ವರ್ಷದಿಂದ ವರ್ಷಕ್ಕೆ ಜರಗುವ ಅನೇಕ ಆಚರಣೆಗಳಲ್ಲಿ ಅಕ್ಷತೆ ಮತ್ತು ಅರಿಶಿಣಕ್ಕೆ ಪ್ರಧಾನ ಸ್ಥಾನವಿದೆ. ಅವರೆಡೂ ಮದುವೆಯಲ್ಲಿ ಅತ್ಯಂತ ಅಗತ್ಯವಾದವು. ಹಸಿವು ಮತ್ತು ಕಾಮದ ಪೂರ್ಯಕೆಯೆ ಈ ಸಂಸ್ಕೃತಿಯ ನಿರ್ಮಾತೃ ಶಕ್ತಿಗಳಾಗಿರುವುದು. ಇದರಿಂದ ಸ್ಪಷ್ಟ.

4. ಸ್ತ್ರೀ ಪುರುಷರ ಜೀವಿತವು ಸುಖಶಾಂತಿಗಳಿಂದ ನಡೆಯುವದಕೋಸ್ಕರ ಆರ್ಯ ಋಷಿಗಳು ಸಂಶರವೆಂಬ ಸಮುದ್ರವನ್ನು ಉತ್ತರಿಸಲು ವಿವಾಹವೆಂಬ ನಾವೆಯನ್ನು ತೋರಿಸಿದ್ದಾರೆ. ಸಂಸಾರವೇ ಸಮುದ್ರ. ಸ್ತ್ರೀ ಪುರುಷರೇ ಯಾತ್ರಿಕರು ಮತ್ತು ವಿವಾಹ ಸಂಸಾರವೇ ನಾವೆಯಾಗಿರುತ್ತದೆ.

5. ಸ್ತ್ರೀ ಪುರುಷರ ಶರೀರ ಮಂದಿರದಲ್ಲಿರುವ ಎರಡು ಆತ್ಮಗಳು ಪರಸ್ಪರ ಆಹ್ವಾನಿಸಿರುತ್ತವೆ. ಈ ಎರಡು ಆತ್ಮಗಳು ಪರಸ್ಪರ ಸೇರುವಂತೆ ಮಾಡುವುದೇ ವಿವಾಹದ ಗುರಿ.

6. ಸ್ತ್ರೀ ಪುರುಷರ ಆತ್ಮದ್ಯಯೆಗಳ ಪರಸ್ಪರ ಏಕೀಕರಣ ಮತ್ತು ಸಮೀಕರಣವೇ ವಿವಾಹವೆನಿಸುವುದು.

7. ವೈಶ್ಯರ ಜನಪದ ಸಾಹಿತ್ಯದಲ್ಲಿ ಹೆಚ್ಚು ಒತ್ತು ಬಿದ್ದಿರುವ ಕೌಟುಂಬಿಕ ಭಾವಗಳು ಮತ್ತು ಸಂಬಂಧಗಳನ್ನು ಅಧಿಕೃತವಾಗಿ ಮದುವೆಯೇ ನಿರ್ಧರಿಸುತ್ತದೆ.

## ಅನುಬಂಧ :

೧. ನಿರೂಪಕರ ವಿವರ ಮತ್ತು ಕರೆಯೋಲೆ
೨. ಪರಾಮರ್ಶನ ಗ್ರಂಥಗಳು
೩. ಪದಕೋಶ
೪. ವಧೂ – ವರರ ಜಾತಕ ಹೊಂದಾಣಿಕೆ ಕೋಷ್ಟಕ
೫. ಭಾವಚಿತ್ರಗಳು.

## ಅನುಬಂಧ

**ನಿರೂಪಕರ ವಿವರ ಮತ್ತು ಕರೆಯೋಲೆ :**

1. ಕೃಷ್ಣಮೂರ್ತಿ, ಮುಖ್ಯೋಪಧ್ಯಾಯರು, ವಯಸ್ಸು 43,
   ಸೋವೇನಹಳ್ಳಿ, ಸಂಡೂರು (ತಾ) ಬಳ್ಳಾರಿ (ಜಿ).

2. ಗೋವಿಂದರಾಜ ಶೆಟ್ಟಿ, W/o. ಶಾಲಾಕ್ಷಿ, ವಯಸ್ಸು : 49,
   ತಿಮ್ಮಲಾಪುರ (ಪೋ) ಸಂಡೂರು (ತಾ) ಬಳ್ಳಾರಿ (ಜಿ)

3. ಗೋವಿಂದಪ್ಪ ಶೆಟ್ಟಿ - ವಯಸ್ಸು : 56,
   ಬಂಡ್ರಿ (ಪೋ) ಸಂಡೂರು (ತಾ) ಬಳ್ಳಾರಿ (ಜಿಲ್ಲೆ)

4. ಗೋಪಾಲ ಶೆಟ್ಟಿ, ಎಸ್. ವೈ. W/o. ರೇಣುಕಮ್ಮ, ವಯಸ್ಸು : 52,
   ಬಂಡ್ರಿ (ಪೋ) ಸಂಡೂರು (ತಾ) ಬಳ್ಳಾರಿ (ಜಿಲ್ಲೆ)

5. ಗೋವರ್ಧನ ಶೆಟ್ಟಿ, W/o. ಲಕ್ಷ್ಮಿ, ವಯಸ್ಸು : 41,
   ಬಂಡ್ರಿ (ಪೋ) ಸಂಡೂರು (ತಾ) ಬಳ್ಳಾರಿ (ಜಿಲ್ಲೆ)

6. ಚನ್ನಬಸಪ್ಪ, W/o. ಪ್ರಮೀಳ, ವಯಸ್ಸು : 45,
   ಸಂಡೂರು. ಬಳ್ಳಾರಿ (ಜಿಲ್ಲೆ)

7. ಜೋಷಿ, W/o. ಗಿರಿಜಾಬಾಯಿ, ವಯಸ್ಸು 48,
   ಸಂಡೂರು ಬಳ್ಳಾರಿ (ಜಿ)

8. ನಾರಾಯಣ ಜೋಷಿ, ವಯಸ್ಸು : 60,
   ಬಂಡ್ರಿ (ಪೋ) ಸಂಡೂರು (ತಾ) ಬಳ್ಳಾರಿ (ಜಿ)

9. ನಾಗರಾಜ ಶೆಟ್ಟಿ, W/o. ಲೀಲಾವತಿ, ವಯಸ್ಸು : 31,
   ಕೂಡ್ಲಿಗಿ, ಬಳ್ಳಾರಿ (ಜಿ)

10. ನಾರಾಯಣ ಶೆಟ್ಟಿ, ವಯಸ್ಸು : 60,
    ಬೊಮ್ಮಘಟ್ಟ, ಸಂಡೂರು(ತಾ) ಬಳ್ಳಾರಿ (ಜಿ)

11. ನಾಗಾರಾಜ ಶೆಟ್ಟಿ, ವಯಸ್ಸು 40,
    ಸೋವೇನಹಳ್ಳಿ, ಸಂಡೂರು (ತಾ) ಬಳ್ಳಾರಿ (ಜಿ)

12. ನಾಗರಾಜ, ಎಸ್.ಟಿ., W/o. ಸಾವಿತ್ರಮ್ಮ ವಯಸ್ಸು 52,
ತಿಮ್ಮಲಾಪುರ, ಕೂಡ್ಲಿಗಿ (ತಾ) ಬಳ್ಳಾರಿ (ಜಿ)

13. ಪ್ರಭಾಕರ್. ಎಂ. W/o.ರೇಣುಕ, ವಯಸ್ಸು : 34,
ಬಂಡ್ರಿ, ಸಂಡೂರು (ತಾ) ಬಳ್ಳಾರಿ (ಜಿ)

14. ಪಾರ್ವತಮ್ಮ, ಎಸ್. ವಯಸ್ಸು : 55,
ಬಂಡ್ರಿ, ಸಂಡೂರು (ತಾ) ಬಳ್ಳಾರಿ (ಜಿ)

15. ಪ್ರಹ್ಲಾದ್ ಶೆಟ್ಟಿ, ವಯಸ್ಸು : 39,
ಕಾಳಿಂಗೇರಿ , ಸಂಡೂರು, ಬಳ್ಳಾರಿ (ಜಿ)

16. ಪತ್ತಿಕೊಂಡ ಶಂಭುನಾಥ, ವಯಸ್ಸು : 52,
ಕೊಟ್ಟೂರು, ಕೂಡ್ಲಿಗಿ (ತಾ) ಬಳ್ಳಾರಿ (ಜಿ)

17. ಭೀಮಣ್ಣ. ಕೆ. , W/o. ಸರೋಜಮ್ಮ, ವಯಸ್ಸು : 58,
ಬಂಡ್ರಿ, ಸಂಡೂರು (ತಾ) ಬಳ್ಳಾರಿ (ಜಿ)

18. ಮಂಜುನಾಥ ಶೆಟ್ಟಿ, W/o.ಅನುಸೂಯ, ವಯಸ್ಸು : 32,
ಅರ್ಲಾಪುರ, ಗಂಗಾವತಿ, ಕೊಪ್ಪಳ (ಜಿ)

19. ರಾಮಣ್ಣ, W/o.ಕಲಾವತಿ, ವಯಸ್ಸು :59
ತೋರಣಗಲ್ಲು, ಸಂಡೂರು (ತಾ) ಬಳ್ಳಾರಿ (ಜಿ)

20. ರಾಮಣ್ಣ ಶೆಟ್ಟಿ, W/o.ಸೀತಮ್ಮ, ವಯಸ್ಸು : 63,
ಬಂಡ್ರಿ ಸಂಡೂರು (ತಾ) ಬಳ್ಳಾರಿ (ಜಿ)

21. ರಾಘವೇಂದ್ರ ಶೆಟ್ಟಿ, ವಯಸ್ಸು : 70,
ಚೋರನೂರು, ಸಂಡೂರು (ತಾ), ಬಳ್ಳಾರಿ (ಜಿ)

22. ವೆಂಕಣ್ಣ ಶೆಟ್ಟಿ, W/o.ಅನುಸೂಯ, ವಯಸ್ಸು : 46,
ನಡಗುರ್ತಿ, ಸಂಡೂರು (ತಾ) ಬಳ್ಳಾರಿ (ಜಿ)

23. ವಸಂತ ಕುಮಾರ, W/o.ಗೀತಾ, ವಯಸ್ಸು : 45,
ಕಾಟಿನ ಕಂಬ, ಸಂಡೂರು (ತಾ) ಬಳ್ಳಾರಿ (ಜಿ)

24. ವೆಂಕಟಾಚಲ ಶೆಟ್ಟಿ, W/o.ಪದ್ಮಾವತಿ , ವಯಸ್ಸು : 62,
ಬಂಡ್ರಿ, ಸಂಡೂರು (ತಾ) ಬಳ್ಳಾರಿ (ಜಿ)

25. ವೆಂಕಯ್ಯ, ವಯಸ್ಸು : 49,
ಸಂಡೂರು, ಬಳ್ಳಾರಿ (ಜಿ)

26. ವೇಣುಗೋಪಾಲ ಶೆಟ್ಟಿ, W/o. ಗೀತಾ, ವಯಸ್ಸು : 31.
ಸೂಲದಹಳ್ಳಿ, ಕೂಡ್ಲಿಗಿ (ತಾ) ಬಳ್ಳಾರಿ (ಜಿ)

27. ವಿಶ್ವನಾಥ. ಎನ್. ಬಿ., W/o. ಜಯಲಕ್ಷ್ಮಿ, ವಯಸ್ಸು : 55,
ಬಂಡ್ರಿ, ಸಂಡೂರು (ತಾ) ಬಳ್ಳಾರಿ (ಜಿ)

28. ವಾಸಣ್ಣ ಶೆಟ್ಟಿ, W/o. ಪದ್ಮಾವತಿ, ವಯಸ್ಸು : 38,
ಬಂಡ್ರಿ, ಸಂಡೂರು (ತಾ) ಬಳ್ಳಾರಿ (ಜಿ)

29. ವೆಂಕಟೇಶ ಶೆಟ್ಟಿ, ವಯಸ್ಸು : 54,
ಯಶವಂತನಗರ, ಸಂಡೂರ (ತಾ) ಬಳ್ಳಾರಿ (ಜಿ)

30. ಧೃವಕುಮಾರ್. ಎಂ. W/o. ದೀಪಾ, ವಯಸ್ಸು : 40,
ಬಂಡ್ರಿ ಸಂಡೂರು (ತಾ) ಬಳ್ಳಾರಿ (ಜಿ)

31. ಶ್ರೀನಿವಾಸ ಶೆಟ್ಟಿ, W/o. ಜ್ಯೋತಿ, ವಯಸ್ಸು : 46,
ಬಂಡ್ರಿ, ಸಂಡೂರು, ಬಳ್ಳಾರಿ (ಜಿ)

32. ನಾಗಪ್ಪ. ಎನ್. ಬಿ. ವಯಸ್ಸು : 70,
ಬಂಡ್ರಿ, ಸಂಡೂರು (ತಾ), ಬಳ್ಳಾರಿ (ಜಿ)

33. ಶೇಷಾಚಲ ಶೆಟ್ಟಿ, ವಯಸ್ಸು : 46,
ಚೋರನೂರು, ಸಂಡೂರು (ತಾ) ಬಳ್ಳಾರಿ (ಜಿ)

34. ಸಣ್ಣಪ್ಪ ಶೆಟ್ಟಿ, W/o. ಚಂದ್ರಿಕಾ, ವಯಸ್ಸು : 30,
ಬಂಡ್ರಿ, ಸಂಡೂರು (ತಾ) ಬಳ್ಳಾರಿ (ಜಿ)

35. ಹನುಮಂತ ಶೆಟ್ಟಿ. ಎಸ್. W/o. ಪುಷ್ಪಾವತಿ ವಯಸ್ಸು : 33,
ಬಂಡ್ರಿ, ಸಂಡೂರು (ತಾ) ಬಳ್ಳಾರಿ (ಜಿ)



ದೇವತಾ ಕಾರ್ಯ 15.12.2004

ಬುಧವಾರ ಬೆಳಗ್ಗೆ 7.30 ರಿಂದ 9.00 ವರೆಗೆ



ಆರತಕ್ಷತೆ ಮತ್ತು ಬಫೆ

ತಾ|| 15.12.2004 ಸಾಯಂಕಾಲ 7.30ಕ್ಕೆ

ಉಪನಯನ

ತಾ|| 16.12.2004 ಗುರುವಾರ

ಬೆಳಗ್ಗೆ 9.00 ರಿಂದ 10.30 ರವರೆಗೆ



ವಿವಾಹ ಮುಹೂರ್ತ

ತಾ|| 16.12.2004 ಗುರುವಾರ ಮಧ್ಯಾಹ್ನ 12.30 ರಿಂದ 1.30 ರವರೆಗೆ

ವಿವಾಹ ಸ್ಥಳ

**ಶ್ರೀ ವಾಸವಿ ಕಲ್ಯಾಣ ಮಂಟಪ ಕೂಡ್ಲಿಗಿ**

ತಮ್ಮ ಸುಖಾಗಮನ ಬಯಸುವವರು

ಶ್ರೀಮತಿ ಶ್ರೀ ಇ.ರಂಗಯ್ಯ ಶೆಟ್ಟಿ ಮತ್ತು ಮಕ್ಕಳು, ಕೂಡ್ಲಿಗಿ.
ಶ್ರೀಮತಿ ಶ್ರೀ ಇ.ನಾರಾಯಣ ಶೆಟ್ಟಿ ಮತ್ತು ಮಕ್ಕಳು ಹೊನ್ನಾಳಿ.
ಶ್ರೀಮತಿ ಶ್ರೀ ಎಂ.ಅಕ್ಕಣ್ಣ ಶೆಟ್ಟಿ ಹೊಸಹಳ್ಳಿ,
ಶ್ರೀಮತಿ ಶ್ರೀ ಇ.ಎಸ್.ಹನುಮಂತ ಶೆಟ್ಟಿ ಐಮಂಗಲ,
ಶ್ರೀಮತಿ ಶ್ರೀ ಜಿ.ಕ್ರಿಷ್ಣ ಮೂರ್ತಿ ಶೆಟ್ಟಿ ದಣಾಪುರ,
ಶ್ರೀಮತಿ ಶ್ರೀ ಜಿ.ಸುಬ್ಬಯ್ಯ ಶೆಟ್ಟಿ ಗುಡಿಪಲ್ಲಿ,
ಶ್ರೀಮತಿ ಶ್ರೀ ಕೆ.ನಾರಾಯಣ ಶೆಟ್ಟಿ ರಾಯದುರ್ಗ,
ಶ್ರೀಮತಿ ಶ್ರೀ ಜಿ.ಹನುಮಂತ ಶೆಟ್ಟಿ ಬಂಡ್ರಿ.
ಶ್ರೀಮತಿ ಶ್ರೀ ಶ್ರೀಪತಿ ಶೆಟ್ಟಿ ನಾಗಲಾಪುರ.
ಶ್ರೀಮತಿ ಶ್ರೀ ಘಂಟಿ ರಾಘವೇಂದ್ರ ಶೆಟ್ಟಿ, ಕೂಡ್ಲಿಗಿ
ಹಾಗೂ ಬಂಧು - ಮಿತ್ರರು





॥ ಶ್ರೀ ಲಕ್ಷ್ಮಿ ರಂಗನಾಥ ಸ್ವಾಮಿ ಪ್ರಸನ್ನ॥  ॥ ಶ್ರೀ ಮಾರುತಿ ಪ್ರಸನ್ನ ॥

**ಇಲ್ಲೂರು ಕುಟುಂಬದ ಶುಭ ವಿವಾಹ ಮಹೋತ್ಸವದ ಆಹ್ವಾನ ಪತ್ರಿಕೆ**

# ಶ್ರೀಮತಿ ಶ್ರೀ ಇಲ್ಲೂರು ರಂಗಯ್ಯ ಶೆಟ್ಟಿ ಸಂಡೂರು

## ಇವರು ಮಾಡುವ ವಿಜ್ಞಾಪನೆಗಳು

ಸ್ವಸ್ತಿಶ್ರೀ ತಾರಣನಾಮ ಸಂವತ್ಸರ ಮಾರ್ಗಶಿರ ಶುದ್ಧ ಪಂಚಮಿ
ತಾ|| 16.12.2004 ಗುರುವಾರದಂದು 12-30 ರಿಂದ 1-10 ರವರೆಗೆ
ಸಲ್ಲುವ ಅಭಿಜನ್ (ಮೀನ) ಲಗ್ನದಲ್ಲಿ ನಮ್ಮ ದ್ವಿತೀಯ ಸುಪುತ್ರಿ

ಚಿ||ಕುಂ||ಸೌ|| **ಶ್ರೀದೇವಿ**



ಚಿ||ರಾ|| **ಎಂ.ಸತ್ಯನಾರಾಯಣ**

(ಬುಡಿಮೆಪಲ್ಲಿ ವಾಸಿಗಳಾದ ಶ್ರೀಮತಿ ಶ್ರೀ ಹೆಚ್.ತಿಮ್ಮಪ್ಪ ಶೆಟ್ಟಿ ಇವರ ಕನಿಷ್ಟ ಪುತ್ರ)

ಇವರ ವಿವಾಹ ಮಹೋತ್ಸವವನ್ನು ಕೂಡ್ಲಿಗಿ ಪಟ್ಟಣದ ಶ್ರೀ ವಾಸವಿ ಕಲ್ಯಾಣ
ಮಂಟಪದಲ್ಲಿ ನೆರವೇರಿಸಲು ಗುರು-ಹಿರಿಯರು ನಿಶ್ಚಯಿಸಿರುತ್ತಾರೆ.
ತಾವುಗಳು ಸಕುಟುಂಬ ಪರಿವಾರ ಸಮೇತರಾಗಿ ಆಗಮಿಸಿ
ವಧೂ-ವರರನ್ನು ಆಶೀರ್ವದಿಸಬೇಕೆಂದು ಕೋರುವ



ಶ್ರೀಮತಿ ಶ್ರೀ ಇಲ್ಲೂರು ರಂಗಯ್ಯ ಶೆಟ್ಟಿ ಮತ್ತು ಮಕ್ಕಳು
ಸಂಡೂರು.

## ಪರಾಮರ್ಶನ ಗ್ರಂಥಗಳು


1. ಅಂಬಳಿಕೆ ಹಿರಿಯಣ್ಣ 1978, 'ಮಲೆನಾಡ ಜನಪದ ಸಂಪ್ರದಾಯಗಳು' ಮೈಸೂರು , ಪ್ರಜ್ವಲ ಪ್ರಕಾಶನ.

2. ಅಂಬಳಿಕೆ ಹಿರಿಯಣ್ಣ 1993, 'ಕಚ್ಚಿಗೌಳಿಗರ ಸಂಸ್ಕೃತಿ' ಬೆಂಗಳೂರು, ಕರ್ನಾಟಕ ಸಾಹಿತ್ಯ ಅಕಾಡೆಮಿ.

3. ಕೃಷ್ಣ ಮೂರ್ತಿ ಹನೂರು, 1993, 'ಮ್ಯಾಸ ಬೇಡರ ಸಂಸ್ಕೃತಿ' ಬೆಂಗಳೂರು, ಕರ್ನಾಟಕ ಸಾಹಿತ್ಯ ಅಕಾಡೆಮಿ.

4. ಕೆಮ್ತೂರು ರಘುಪತಿ ಭಟ್ಟ, 1979, 'ತುಳುನಾಡಿನ ಸ್ಥಳ ನಾಮಗಳು' ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು.

5. ಖಂಡೋಬಾ ಪಿ.ಕೆ. 1991, 'ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ (ಪಿ. ಎಚ್.ಡಿ. ಪ್ರಬಂಧ) ಗುಲ್ಬರ್ಗಾ ದಿ. ತೇಜಸಿಂಗ್ ರಾತೋಡ್ ಮೆಮೋರಿಯಲ್ ಟ್ರಸ್ಟ್.

6. ಚಂದ್ರಶೇಖರ್ ಕಂಬಾರ (ಸಂ)1985, ' ಕನ್ನಡ ಜಾನಪದ ವಿಶ್ವಕೋಶ' ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ.

7. ಚಲುವೇಗೌಡ ತ. ಚಿ. 1978. 'ಕೆಲವು ಜನಪದ ಸಂಪ್ರದಾಯಗಳು' ಮೈಸೂರು, ತಳಗವಾದಿ ಪ್ರಕಾಶನ, ಸರಸ್ವತೀ ಪುರಂ.

8. ಜೋಶಿ ಗುರುನಾಥ, 1990, ಗುರುನಾಥ ಜೋಶಿ ಇವರ ಕನ್ನಡ – ಕನ್ನಡ ಶಬ್ದಕೋಶ, ಗದಗ.

9. ನಂಜಮ್ಮಣ್ಣಿ ಎಂ. 1974, 'ಸಾಮಾಜಿಕ ಮಾನವ ಶಾಸ್ತ್ರ' ಮೈಸೂರು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವ ವಿದ್ಯಾಲಯ

10. ನರಸಿಂಹಾಚಾರ್ ಡಿ. ಎಲ್. (ಸಂ) 1970 ಕನ್ನಡ ನಿಘಂಟು ಮೊದಲನೆಯ ಸಂಪುಟ, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷುತ್ತು.

11. ನಾಯಕ. ಹಾ. ಮಾ (ಸಂ) 1977, ' ಕನ್ನಡ ರತ್ನ ಕೋಶ' ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು.

12. ಪುರುಷೋತ್ತಮ ಬಿಳಿಮಲೆ, 1990, 'ಕರಾವಳಿ ಜಾನಪದ' ಮಂಗಳ ಗಂಗೋತ್ರಿ, ಮಂಗಳೂರು ವಿಶ್ವ ವಿದ್ಯಾಲಯ.

13. ಪುರುಷೋತ್ತಮ ಬಿಳಿಮಲೆ, 1997, ' ಜಾನಪದ ಕೈಪಿಡಿ' ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು.

14. ಪಂಪಯ್ಯ ಶೆಟ್ಟಿ, 2004, 'ವೈಶ್ಯ ವಾರ್ತಾ ಪತ್ರಿಕೆ' ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು.

15. ರಮೇಶ. ಸ.ಚಿ. 2005, 'ಉಪ್ಪಾರರ ಮದುವೆ ಸಂಪ್ರದಾಯಗಳು' ಒಂದು ಅಧ್ಯಯನ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

16. ರಮೇಶ. ಸ.ಚಿ. 2004, 'ಕರ್ನಾಟಕ ಜಾನಪದ' (ಸಂ. ೧) ಕನ್ನಡ ವಿಶ್ವವಿದ್ಯಾಲಯ ಹಂಪಿ.

17. ರಮೇಶ. ಸ.ಚಿ. 2005, 'ಕರ್ನಾಟಕ ಜಾನಪದ' (ಸಂ. ೨) ಕನ್ನಡ ವಿಶ್ವವಿದ್ಯಾಲಯ ಹಂಪಿ.

18. ರಾಮಾನುಜಂ ವೈ. ಎಸ್. 1975, 'ಕೊಡವರು' ಮೈಸೂರು ಪ್ರಸಾರಾಂಗ , ಮೈಸೂರು ವಿಶ್ವ ವಿದ್ಯಾಲಯ.

19. ರಾಮಚಂದ್ರ ಗುಪ್ತ, 2003, 'ವೈಶ್ಯ ಪತ್ರಿಕೆ' ವಾಸವಿ ಪುಸ್ತಕ ಭಂಡಾರ, ಶಿವಮೊಗ್ಗ.

20. ವೆಂಕಟೇಶ ಇಂದ್ವಾಡಿ,2002, ದೇವಾ - ದೇವಿ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

21. ವಿಶ್ವನಾಥ, ಬದಿಕಾನ 1994, ಗೌಡ ಕನ್ನಡದ ಜನಪದ ಕತೆಗಳು ವರ್ಗ ಮತ್ತು ಆಶಯ ಸೂಚಿ, ಮಂಗಳ ಗಂಗೋತ್ರಿ.

22. ವೆಂಕಟ ಸುಬ್ಬಯ್ಯ ಜಿ. (ಸಂ) 1985, ಕನ್ನಡ - ಕನ್ನಡ - ಇಂಗ್ಲೀಷ್ ನಿಘಂಟು, ಬೆಂಗಳೂರು, ಐ.ಬಿ. ಎಚ್. ಪ್ರಕಾಶನ, ಗಾಂಧಿ ನಗರ.

23. ವೆಂಕಟಾಚಲ ಗುಪ್ತ, 1989, 'ವೈದಿಕ ಕರ್ಮಗಳು' ಚಿತ್ರದುರ್ಗ.

24. ಶಂಕರನಾರಾಯಣ, ತಿ. ನಂ. 1982, 'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು' ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ.

25. ಶಿವರಾಮ ಕಾರಂತ 1990 'ಸಿರಿಗನ್ನಡ ಅರ್ಥಕೋಶ' ಬೆಂಗಳೂರು, ಎಸ್. ಬಿ. ಎಸ್. ಪಬ್ಲೀಷರ್.

26. ಸದಾನಂದ ಕನವಳ್ಳಿ 1992, ರಾಬರ್ಟ್ ಸಿವಿಲ್ ಮರೆತು ಹೋಗಿರುವ ಸಾಮ್ರಾಜ್ಯ ವಿಜಯನಗರ, ಹಂಪಿ ಕನ್ನಡ ವಿಶ್ವ ವಿದ್ಯಾಲಯ.

27. ಹರಿಲಾಲ್ ಪವಾರ 1996, 'ಲಂಬಾಣಿಗರ ಮದುವೆ ಸಂಪ್ರದಾಯಗಳು' ಪ್ರಸಾರಾಂಗ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ.

<u>ಪದಕೋಶ</u>

| ಕನ್ನಡ | ತೆಲಗು | ತಮಿಳು |
|---|---|---|
| ಅಕ್ಕಿ | ಬಿಯಮ್ | ಅರಸಿ |
| ಅಮಗಿ | ಚೊಕ್ಕ | ಸಟ್ಟೈ |
| ಅಂಜು | ಜಂಕು | ಭಯಂ |
| ಅಂದಾ | ಅಂದಮು | ಅಳಗ |
| ಅಗಸ | ಚಾಕಲಿ | ಬಣ್ಣನಾನ್ |
| ಅಗ್ನಿ | ಅಗ್ಗಿ | ನೆರಪು |
| ಅಜ್ಜಿ | ಅವ್ವ | ಪಾಟಿ |
| ಅಜ್ಜ | ತಾತಾ | ತಾತಾ |
| ಅಟ್ಟ | ಅಟ್ಟಮು | ಅಟ್ಟಾಣಿ |
| ಅಡಿಗೆ | ವಂಟ | ಸಮ್ಮೆಲ್ |
| ಅತಿ | ಎಕ್ವ, ಚಾಲು | ಅಧಿಕಂ |
| ಅತಿಥಿ | ಚುಟ್ಟಾಲು | ವಿರುಂದಾಳಿ |
| ಅತ್ತಿಗೆ | ವದಿನ | ಅಣ್ಣಿ |
| ಅನ್ನ | ಅನ್ನಂ | ಸೋರ್ |
| ಅಪಾಯ | ಪ್ರಮಾದಮು | ಅಬಾಯಂ |
| ಅವರೆ | ಅನಮುಲು | ಅವರೈ |
| ಅಳಿಯ | ಅಲ್ಲುಡು | ಅಣಿನಿಕ |
| ಆಳು | ಪನಿವಾಳು | ವೇಲ್ ಕಾರನ್ |
| ಆಚೆ | ಬೈಟಿ | ವೇಳಿಯ |
| ಆನೆ | ಏನುಗ | ಆನೈ |
| ಆಣಿ | ಆನ | ಆಣೈ |
| ಆಭರಣಂ | ನಗ, ಸೊಮ್ಮಲು | ಆಭರಣಂ |
| ಆಸ್ತಿ | ಆಸ್ತಿ | ಸೊತ್ತು |

| | | |
|---|---|---|
| ಇಂಗು | ಇಂಗ್ವ | ತರುಗಾಯಂ |
| ಇಡು | ಪೆಟ್ಟು | ವೇಯಿ |
| ಇಡ್ಲಿ | ಇಡ್ಲಿ | ಇಡ್ಲಿ |
| ಇರು | ಉಂಡು | ಇರು |
| ಇಲಿ | ಎಲಕ | ಎಲಿ |
| ಇಳಿ | ದಿಗು | ಇರುಂಗು |
| ಉಗುಳು | ಉಮ್ಮಿ | ತುಪ್ಪು |
| ಉತ್ತಮ | ಮಂಚಿ | ಉತ್ತಮಾ |
| ಉಳು | ದುಕ್ಕಿ | ಉಳುದಲ್ |
| ಊಟ | ಭೋಜನ, ತಿಂಡಿ | ಸಾಪಾಡು |
| ಎಂಜಲು | ಎಂಗಲಿ | ಎಣ್ಣೆ |
| ಎಣ್ಣೆ | ನೂನೆ | ಇಲ್ಯೈ |
| ಎಲ್ಲಿ | ಎಕ್ಕಡ | ಎಂಗೆ |
| ಎಷ್ಟು | ಎಂತ | ಎತ್ತನ್ಯೈ |
| ಎಳೆ | ಲಾಗು | ಈಡು |
| ಎದೆ | ಗುಂಡೆಲು | ನೆಂಜು |
| ಒಣಗು | ಎಂಡು | ಬಲರ್ |
| ಒದೆ | ತನ್ನು | ಉದಯ್ |
| ಒದ್ದೆ | ತ್ಯಾಮು | ಈರಂ |
| ಒನಕೆ | ರೊಕಲಿ | ಆಡಮ |
| ಒಳಗೆ | ಲೋಲಲ | ಉಳ್ಳೆ |
| ಒಳಿತು | ಮಂಚಿ | ನಲ್ಲದಿ |
| ಒಡು | ಪಾರು | ಓದು |
| ಓಣಿ | ವೀದಿ | ಸಂದ್ |
| ಓರೆಗಿತ್ತಿ | ತೋಡುಕೊಡಾಲು | ಒರಗಿತ್ತಿ |
| ಓಲೆ | ಕಮ್ಮು | ಕಮ್ಮಲ್ |

| | | |
|---|---|---|
| ಔಷಧಿ | ಮಂದು | ಮಹೆಂದು |
| ಕಚ್ಚು | ಕೊರಕು | ಕಡಿ |
| ಕಜ್ಜಾಯ | ಕಜ್ಜಾಯಂ | ಅದಿರಸಂ |
| ಕಡ್ಲೆ | ಸೆನಗು | ಪೊಟ್ಟುಕಡಲೆ |
| ಕಣ್ಣು | ಕನ್ನು | ಕನ್ |
| ಕಣಜ | – | ಕುದುರು |
| ಕತ್ತಲು | ಚೀಗಟಿ | ಇರಟ್ಟು |
| ಕತ್ತು | ಗೊಂತು | ಕಳುತ್ತು |
| ಕತ್ತೆ | ಗಾಡದಿ | ಕಳುದೈ |
| ಕದ | ತಲುಪು | ಕದವು |
| ಕನಸು | ಕಲಾ | ಕನವು |
| ಕನ್ನಡಿ | ಆದ್ದಮು | ಕನ್ನಾಡಿ |
| ಕನ್ಯೆ | ಅಣೆವಟು | ಕನ್ನಿ |
| ಕಪಾಲ | ಚಂಪ | ಕನ್ನಂ |
| ಕಪ್ಪು | ನಲಪು | ಕರುಪು |
| ಕಮ್ಮಿ | ತಕ್ವ | ಕಮ್ಮಿ |
| ಕೈ | ಚೈ | ಕೈ |
| ಕರು | ದೂಡ | ಕನ್ರುಕಟಿ |
| ಕರೆ | ಪಿಲಿ | ಕೂಪಿಡು |
| ಕಲಿ | ನೇರ್ಚು | ಕಟ್ರುಕೊಳ್ಳೆ |
| ಕಕ್ಕಸು | ಪೆಳ್ಳು | – |
| ಕಸ | ಚತ್ತೆ | ಕುಪ್ಪೈ |
| ಕಳು | ದೊಂಗು | ತಿರುಡು |
| ಕಳ್ಳ | ದೊಂಗ | ತಿರುಡನ್ |
| ಕಾಗೆ | ಕಾಕಿ | ಕಾಗಂ |
| ಕಾಡಿಗೆ | ಕಾಟುಕ | ಮೈ |

| | | |
|---|---|---|
| ಕಾಣು | ಕನು | ಪಾರ್ |
| ಕಾವಲು | ಕಾವಲಿ | ಕಾವಲ್ |
| ಕಿವಿ | ಚೆವಿ | ಕಾದು |
| ಕುಡಿ | ತಾಗು | ಕುಡಿ |
| ಕುದುರೆ | ಗುರಂ | ಕುದುರೈ |
| ಕೂಸು | ಬಿಡ್ಡ | ಕೊಳಂದ್ಯೆ |
| ಕೆಂಪು | ಎರದಿ | ಸಿವಪ್ಪು |
| ಕೆಮ್ಮು | ದಗ್ಗು | ಇರಮ್ಲು |
| ಕೆರೆ | ಚೆರವು | ಏರಿ |
| ಕೆಲಸ | ಪನಿ | ವೇಲೈ |
| ಕೆಳಗೆ | ದಿಗುವಾ | ಕೀಳೈ |
| ಕೇರಿ | ವೀದಿ | ತೆರು |
| ಬಿಸಿ | ಉಡುಕದಿ | ಸೂಡು |
| ಗಂಡ | ಮೊಗಡು | ಕಣವನ್ |
| ಗಂಡಸರು | ಮೊಗವಾಳ್ಳು | ಅಣಿಗಳ್ |
| ಗಂಡಸು | ಮೊಗವಾಡು | ಅಣಿವಾನ್ |
| ಗುಡಿಸು | ಉಡುಚು | ಪೆರಕು, ಕೂಟ |
| ಗೂಳಿ | ಅಬೊತು | ಕಾಳೈ |
| ಗಿಡ | ಚಟ್ಟು | ಪೆಡಿ |
| ಚಟ್ನಿ | ಚಟ್ನಿ | ಚಟ್ನಿ |
| ಚಪ್ಪಲಿ | ಚಪ್ಪು | ಸೆರುಪು |
| ಚಳಿ | ಚಳಿ | ಕುಳಿರ್ |
| ಚೆನ್ನಾಗಿ | ಬಾಗಾ | ಅಳಗಾ, ನಂಡ್ರಾಗ |
| ಜಗಳ | ಜಗಳಮು | ಸಂಡೈ |
| ಜಮೀನು | ಜಮೀನು | ವೊಯಲ್, ಕಳನಿ |
| ಜ್ವರ | ಜ್ವರಮು | ಕಾಚಲ್ |

| | | |
|---|---|---|
| ಟಗರು | ಪೊಟ್ಟೇಲ್ | ಎರಮುಕಡ |
| ಟೋಪಿ | ಟೋಪಿ | ಟೋಪಿ |
| ತಂಗಳು | ಸದ್ದಿ | ಪಳಯದು |
| ತಂಗಿ | ಚೆಲ್ಲಲು | ತಂಗ್ಯೆ |
| ತಂದೆ | ತಂಡ್ರಿ | ಅಪ್ಪ |
| ತಿಗಣಿ | ನಲ್ಲ | ಮೂಟ್ಟೈಮುಚ್ಚಿ |
| ತಣ್ಣಗೆ | ಚಲ್ಲಗ | ಕುಳಿರಚಯಾಗ್ |
| ತಬ್ಬಲಿ | ಅನಾಥ | ಅನಾದೈ |
| ತಾಯಿ | ತಲ್ಲಿ | ತಾಯ್ |
| ತಿಲಕ | ತಿಲಕಂ | ಬಟ್ಟು |
| ತಿಳಿ | ತೆಲಿ | ಪುರಿಂದು |
| ತಿಳಿಸು | ತಲಪು | ಪುರಿಯಲ್ಯೆ |
| ತುಂಬಾ | ನಿಂಡ | ನಿರೈ |
| ತುಂಬು | ನಿಂಡು | ನಿರುಪ್ಪು |
| ತುಳಿ | ತೊಕ್ಕು | ಮಿದಿತ್ತಲ್ |
| ತೆನೆ | ಎನ್ನು | ಕದಿರ್ |
| ತೆರೆ | ತೀಯ್ಯು | ತೀರಾ |
| ತೊಪ್ಪೆ | ಪ್ಯಾಡ | ಸಾಣಿ |
| ತೊಳೆ | ಕಡಗು | ಕಳಗು |
| ತೋಟ | ತೋಟ | ತೋಟಂ |
| ದಾರಿ | ದಾವ | ವಳಿ |
| ದಿನ | ರೋಜು | ದಿನಂ |
| ದೀಪ | ದೀಪಂ | ದೀಪಂ |
| ದೂರ | ದೌವ್ವ | ದೂರಂ |
| ದೇವರು | ದೇವುಡು | ಕಡವುಳ್ |
| ನೆಂಟರು | ಚುಟ್ಟಾಲು | ಸ್ವಂದಕಾರುಗಳ್ |

| | | |
|---|---|---|
| ನಗು | ನವ್ವು | ಸಿರಿ |
| ನಾಚಿಕೆ | ಸಿಗ್ಗು | – |
| ನಾಮ | ಪೇರು | ಪೇರ್ |
| ನಾಯಿ | ಕುಕ್ಕ | ನಾಯ್ಕೈ |
| ನಾಳೆ | ರೇಪ್‌ಕಿ | ನಾಳ್ಳೈ |
| ನಿನ್ನೆ | ನಿನ್ನೆ | ನೇಟ್ರು |
| ನಿಲ್ಲು | ನಿಲುವು | ನಿಲ್ |
| ನೀರು | ನೀಳಲು | ತಣ್ಣೆ |
| ನುಂಗು | ಮಿಂಗು | ಮುಳುಂಗು |
| ನೋಡು | ಚೂಡು | ಪಾರ್ |
| ಪರಕೆ | ಪರಕ | ತಡಪ್ಪೈ |
| ಬಂದರು | ವಚ್ಚಾರು | ಬಂದರ್ |
| ಬದನೆಕಾಯಿ | ವಂಕಾಯಿ | ಕತ್ತರಿಕಾಯಿ |
| ಬಟ್ಟೆ | ಬಟ್ಟ | ತುಣಿ |
| ಭತ್ತ | ವಡ್ಡಲು | ನೆಲ್ |
| ಬನ್ನಿ | ರಾಂಡಿ | ವಾಂಗೊ |
| ಬಸಿ | ವಂಡು | ವಡಿಗಟ್ಟು |
| ಬಸಿರಿ | ನಿಂಡ್ ಮನಸಿ | – |
| ಬಳೆ | ಕಾಜಲು | ವಳ್ಳೆಲ್ |
| ಬಳ್ಳಿ | ವೇಗ | ಕೋಡಿ |
| ಬಾಚು | ದುವ್ವು | ಸೀವು |
| ಬಾಗು | ವಂಗು | ಕುನಿ |
| ಬಾಳೆಹಣ್ಣು | ಚೆಲುವ | ಕೊಡಂ |
| ಬಿಚ್ಚು | ವಿಪ್ಪು | ಅವಿಳತ್ |
| ಬೀಸು | ವೀಸು | ವೀಸ್ |
| ಬಿಡು | ಉಡಿ | ವಿಡು |

| | | |
|---|---|---|
| ಬಿತ್ತ | ವಿತ್ತ | ವಿದೆಯ್ |
| ಬಿತ್ತು | ವಿತ್ತು | ವಿದೈತ್ತಲ್ |
| ಬಿಳಿ | ತೆಲುಪು | ತ್ರಿಳ್ಳೈ |
| ಬೀದಿ | ಬೀದಿ | ವೀದಿ |
| ಬೀಳು | ಪಡು | – |
| ಬೂದಿ | ಬೂಡ್ಲು | ಸಾಂಬಲ್ |
| ಬೆಂಕಿ | ಅಗ್ಗಿ | ತೀ, ತಣಲ್ |
| ಬೆಟ್ಟ | ಕೊಂಡ | ಮಲೈ |
| ಬೆಣ್ಣೆ | ವೆನ್ನ | ವೆಣ್ಣೈ |
| ಬೆನ್ನು | ವೆನ್ನ | – |
| ಬೇಸಿಗೆ | ಯಾಸ್ಗ | ಕೊಡೈ |
| ಬೆಳಕು | ಎಲುಹು | ವಿಳಕ್ಕ್ |
| ಬೆಳೆ | ಪಂಜ | ವೈರ್ |
| ಬೆಳ್ಳಿ | ವೆಂಡಿ | ವೆಳ್ಳಿ |
| ಬೇರೆ | ವೇರೆ | ವೇರು |
| ಬೇಳೆ | ಪೊಪ್ಪು | ಪರಪು |
| ಬೈಯಿ | ತಿಟ್ಟು | ತಿಟ್ಟು |
| ಬೇವು | ಯೇಪು | ವೇಂಬು |
| ಮಜ್ಜಿಗೆ | ಮಜ್ಜಿಗೆ | ಮೋರ್ |
| ಮಡಿಕೆ | ಕುಂಡ | ಪಾನೈ |
| ಮಡದಿ | ಪೆಂಡ್ಲಾಂ | ಮನವಿ |
| ಮಗಳು | ಕೂತ್ರು | ಮಗಳ್ |
| ಮದುವೆ | ಪೆಳ್ಳಿ | ಕಲ್ಯಾಣ, ತಿರುಮಣಂ |
| ಮದ್ದು | ಮಂದು | ಮರಂದು |

# ವಧೂ–ವರರ ಜಾತಕದ ಹೊಂದಾಣಿಕೆ ಕೋಷ್ಟಕ

ವರರ ನಕ್ಷತ್ರಗಳು

| ವಧೂಗಳ ನಕ್ಷತ್ರಗಳು | | | | ವಧೂಗಳ ನಕ್ಷತ್ರಗಳು | | | | |
|---|---|---|---|---|---|---|---|---|
| ಅಶ್ವಿನಿ ಮೇಷರಾಶಿ ದೇವಗಣ ಆದಿನಾಡಿ ಗಣ | ಭರಣಿ ಮೇಷರಾಶಿ ಮನುಷ್ಯಗಣ ಮಧ್ಯನಾಡಿ ಗಣ | ಕೃತಿಕ-1 ಮೇಷರಾಶಿ ರಾಕ್ಷಸಗಣ ಅಂತ್ಯನಾಡಿ | ಕೃತಿಕ 2-3-4 ವೃಷಭ ರಾಶಿ ರಾಕ್ಷಸಗಣ ಅಂತ್ಯನಾಡಿ | ರೋಹಿಣಿ ವೃಷಭ ರಾಶಿ ಮನುಷ್ಯ ಗಣ ಅಂತನಾಡಿ | ಮೃಗಶಿರಾ 1-2 ವೃಷಭ ರಾಶಿ ದೇವಗಣ | ಪುನರ್ವಸು-4 ಕರ್ಕಾಟಕ ರಾಶಿ ದೇವಗಣ ಆದಿನಾಡಿ | ಪುನರ್ವಸು-4 ಕರ್ಕಾಟಕ ರಾಶಿ ದೇವಗಣ ಆದಿನಾಡಿ | ಪುನರ್ವಸು-4 ಕರ್ಕಾಟಕ ರಾಶಿ ದೇವಗಣ ಆದಿನಾಡಿ |
| ಅಶ್ವಿನಿ-25 | ಅಶ್ವಿನಿ-33 | ಅಶ್ವಿನಿ-25 | ಅಶ್ವಿನಿ-25 | ಅಶ್ವಿನಿ-26 | ಅಶ್ವಿನಿ-30 | ಅಶ್ವಿನಿ-27 | ಅಶ್ವಿನಿ-27 | ಅಶ್ವಿನಿ-20 |
| ಭರಣಿ-ಗ್ರ-32 | ಭರಣಿ-25 | ಭರಣಿ-29 | ಭರಣಿ-25 | ಭರಣಿ-30 | | ಕೃತಿಕಾ-27 | ಕೃತಿಕಾ2-3-4-22 | ಭರಣಿ-22 |
| ಕೃತಿಕ-ಗ್ರ-28 | ಉತ್ತರ-20-28 | ಕೃತಿಕ-25 | ಮೃಗಶಿರಾ-1-2-25 | ಕೃತಿಕಾ-20-2-3-4 | ಕೃತಿಕಾ-30 | ರೋಹಿಣಿ-31 | ರೋಹಿಣಿ-31 | ಕೃತಿಕಾ-24 |
| ಪುಷ್ಯ-ಗ್ರ 25 | ಮುಖೆ-ಗ್ರ-22 | ಮುಖೆ-ಗ್ರ-20 | ಕೃತಿಕಾ – 25 | ಮೃಗಶಿರಾ-ಗ್ರ-35 | ರೋಹಿಣಿ-34 | ಮೃಗಶಿರಾ-28 | ಮೃಗಶಿರಾ-30 | ರೋಹಿಣಿ -25 |
| ಮಖೆ-21 | ಸ್ವಾತಿ-27 | ಪುಷ್ಯ-20 | ಹಸ್ತಾ-20 | ಚಿತ್ತಾ -21 | ಮೃಗಶಿರಾ-ಗ್ರ-25 | ಆರಿದ್ರಾ ಗ್ರ-32 | ಆರಿದ್ರಾ-25 | ಮೃಗಶಿರಾ-30 |
| ಪುಬ್ಬ-26 | ವಿಶಾಲ-27 | ಉತ್ತರ-19 | ಚಿತ್ತಾ-23 | ಅನುರಾಧ – 26 | ಆರಿದ್ರಾ ಗ್ರ-23 | ಹಸ್ತಾ-ಗ್ರ-26 | ಪುಬ್ಬ-ಗ್ರ-24 | ಆರಿದ್ರಾ-23 |
| ಸ್ವಾತಿ-28 | ಅನುರಾಧ-23 | ಸ್ವಾತಿ-17 | ಅನುರಾಧ-25 | ಜೇಷ್ಠಾ-24 | | ಸ್ವಾತಿ-25 | ಚಿತ್ತಾ-ಗ್ರ-20 | ಪುನರ್ವಸು1-2-25 |
| ವಿಶಾಲ 22-26 | ಜೇಷ್ಠಾ-29 | ವಿಶಾಲ-22 | ಜೇಷ್ಠಾ-28 | ಮೂಲ -18 | ಪುನರ್ವಸು-21 | ಮೂಲ-23 | ಸ್ವಾತಿ-21 | ಸ್ವಾತಿ-ಗ್ರ-25 |
| ಅನುರಾಧ -35 | ಮೂಲ-26 | ಅನುರಾಧ-29 | ಮೂಲ-27 | ಪು. ಆಷಾಡ-26 | ಉತ್ತರ-1-2-3-23 | ಉ.ಆಷಾಡ-26 | ವಿಶಾಖ-2-3-19 | ಸ್ವಾತಿ-ಗ್ರ-22 |
| ಜೇಷ್ಠಾ-23 | ಪೂ.ಭಾದ್ರ*20 | ಜೇಷ್ಠಾ-32 | ಪೂ.ಅಷಾಡ-19 | ಉ.ಆಷಾಡ-22 | ಹಸ್ತಾ-ಗ್ರ-25 | ಶ್ರವಣ-29 | ಪೂ.ಆಷಾಡ-27 | ಅನುರಾಧ-21 |
| ಮೂಲ-ಗ್ರ. ಸ್ತ್ರೀ-17 | ಪೂ.ಆಷಾಡ-21 | ಮೂಲ-32 | ಧನಿಷ್ಠ-28 | ಶ್ರವಣ-19 | ಸ್ವಾತಿ-27 | ಶತಭಿಷಾ-27 | ಉ.ಆಷಾಡ-24 | ಪೂ.ಆಷಾಡ-25 |
| ಪೂ. ಆಷಾಡ -30 | ಉ.ಆಷಾಡ-32 | ಪೂ.ಆಷಾಡ-24 | ಶತಭಿಷಾ-33 | ಧನಿಷ್ಠ-26 | ವಿಶಾಲ-23 | ಉ.ಭಾದ್ರ-17 | ಧನಿಷ್ಠ-25 | ಶ್ರವಣ-27 |
| ಉ.ಆಷಾಡ-30 | ಶ್ರವಣ-22 | ಧನಿಷ್ಠ - 23 | ಪೂ.ಭಾದ್ರ1-2-3-22 | ಶತಭಿಷಾ-23 | ಅನುರಾಧ-22 | ರೇವತಿ-24 | ಪೂ.ಭಾದ್ರಾ-23 | ಧನಿಷ್ಠ-26 |
| ಶ್ರವಣ-26 | ಉ.ಭಾದ್ರ-22 | ಶತಭಿಷಾ-28 | ಉ. ಭಾದ್ರಾ-22 | ಪೂ.ಭಾದ್ರ-32 | ಜೇಷ್ಠಾ-23 | | ಉ.ಭಾದ್ರ-24 | ಶತಭಿಷಾ-20 |
| ಧನಿಷ್ಠ-18-19 | ರೇವತಿ-30 | ಪೂ.ಭಾದ್ರ(4)-22 | | ಉ.ಭಾದ್ರಾ-24 | ಮೂಲ-23 | | ರೇವತಿ-26 | ಉ.ಭಾದ್ರಾ-26 |
| ಉ. ಭಾದ್ರ-31 | | ಉ. ಭಾದ್ರ-27 | | ರೇವತಿ-18 | ಉ.ಆಷಾಡ-28 | | | ರೇವತಿ-24 |
| ರೇವತಿ-32 | | ರೇವತಿ-16 | | | ಶ್ರವಣ-28 | | | |
| | | ಚಿತ್ರಾ-3-4-27 | | | ಶತಭಿಷಾ-28 | | | |
| | | | | | ಪೂ.ಭಾದ್ರಾ-27 | | | |
| | | | | | ರೇವತಿ-24 | | | |

| ಪುನರ್ವಸು-4 ಕಕಾಟಕ ರಾಶಿ ದೇವಗಣ ಆದಿನಾಡಿ | ಪುಷ್ಯ ಕರ್ಕಾಟಕ ರಾಶಿ ದೇವಗಣ ಮಧ್ಯನಾಡಿ | ಆಶ್ಲೇಷಾ ಕರ್ಕಾಟಕ ರಾಶಿ ರಾಕ್ಷಸಗಣ ಅಂತ್ಯಗಣ | ಮಖೆ ಸಿಂಹರಾಶಿ ರಾಕ್ಷಸಗಣ ಅಂತ್ಯನಾಡಿ | ಪುನರ್ವಸು-4 ಕರ್ಕಾಟಕ ರಾಸಿ ದೇವಗಣ ಆದಿನಾಡಿ | ಪುನರ್ವಸು-4 ಕಕಾಟಕ ರಾಶಿ ದೇವಗಣ ಆದಿನಾಡಿ | ಪುನರ್ವಸು-4 ಕಕಾಟಕ ರಾಶಿ ದೇವಗಣ ಆದಿನಾಡಿ | ಪುನರ್ವಸು-4 ಕಕಾಟಕ ರಾಶಿ ದೇವಗಣ ಆದಿನಾಡಿ | ಪುನರ್ವಸು-4 ಕಕಾಟಕ ರಾಶಿ ದೇವಗಣ ಆದಿನಾಡಿ |
|---|---|---|---|---|---|---|---|---|
| ಅಶ್ವಿನಿ -23 | ಅಶ್ವಿನಿ-28 | ಅಶ್ವಿನಿ-25 | ಅಶ್ವಿನಿ-23 | ಅಶ್ವಿನಿ-31 | ಅಶ್ವಿನಿ-23 | ಅಶ್ವಿನಿ-19 | ಭರಣಿ-26 | ಅಶ್ವಿನಿ-20 |
| ಭರಣಿ-25 | ಭರಣಿ-21 | ಭರಣಿ-21 | ಭರಣಿ-26 | ಭರಣಿ-21 | ಭರಣಿ-32 | ಭರಣಿ-28 | ಕೃತಿಕಾ-29 | ಕೃತಿಕಾ-31 |
| ಕೃತಿಕಾ-23 | ಕೃತಿಕಾ-21 | ಕೃತಿಕಾ-23 | ಕೃತಿಕಾ-21 | ಕೃತಿಕಾ-21 | ಕೃತಿಕಾ-1-23 | ಕೃತಿಕಾ-24 | ಮೃಗಶಿರಾ-34 | ರೋಹಿಣಿ-26 |
| ರೋಹಿಣಿ-20 | ರೋಹಿಣಿ-24 | ಮೃಗಶಿರಾ-20 | ಮೃಗಶಿರಾ-26 | ರೋಹಿಣಿ-22 | ರೋಹಿಣಿ-26 | ರೋಹಿಣಿ-32 | ಆರಿದ್ರಾ-21 | ಮೃಗಶಿರಾ-15 |
| ಮೃಗಶಿರಾ-4-25 | ಆರಿದ್ರಾ-25 | ಪುನರ್ವಸು-30 | ಪುನರ್ವಸು-21 | ಮೃಗಶಿರಾ20-3-4 | ಮೃಗಶಿರಾ-26 | ಮೃಗಶಿರಾ-30 | ಪುನರ್ವಸು-21 | ಆರಿದ್ರಾ-28 |
| ಪುನರ್ವಸು-4-25 | ಪುನರ್ವಸು-28 | | ಪುಷ್ಯಾ-27 | ಆರಿದ್ರಾ-27 | ಆರಿದ್ರಾ-22 | ಆರಿದ್ರಾ-26 | ಪುಷ್ಯಾ-26 | ಪುನರ್ವಸು-25 |
| ಪುಷ್ಯಾ-ಗ್ರ-35 | ಪುಷ್ಯಾ-ಗ್ರ-25 | ಪುಷ್ಯಾ-25 | ಆಶ್ಲೇಷಾ-22 | ಪುನರ್ವಸು-29 | ಪುನರ್ವಸು-21 | ಪುನರ್ವಸು-23-1-2-3 | ಆಶ್ಲೇಷಾ-25 | ಆಶ್ಲೇಷಾ-25 |
| ಆಶ್ಲೇಷಾ-ಗ್ರ-29 | ಆಶ್ಲೇಷಾ-ಗ್ರ-35 | ಆಶ್ಲೇಷಾ-ಗ್ರ-25 | ಮಖೆ-ಗ್ರ-25 | ಪುಷ್ಯಾ-21 | ಪುಷ್ಯಾ-32 | ಪುಷ್ಯಾ-28 | ಮಖೆ-25 | ಮಖೆ-31 |
| ವಿಶಾಖ-4-19 | ಉತ್ತರ-1-ಗ್ರ-20 | ಚಿತ್ತಾ-ಗ್ರ-20 | ಪುಬ್ಬ-ಗ್ರ-30 | ಆಶ್ಲೇಷಾ-24 | ಆಶ್ಲೇಷಾ-24 | ಆಶ್ಲೇಷಾ-20 | ಪುಬ್ಬ-30 | ಉತ್ತರ-23 |
| ಅನುರಾಧ-27 | ಜೇಷ್ಠಾ-23 | ಜೇಷ್ಠಾ-24 | ಉತ್ತರ-1-36 | ಮಖೆ-30 | ಮಖೆ-29 | ಮಖೆ-26 | ಉತ್ತರ-22 | ಹಸ್ತಾ-27 |
| ಪೂ.ಆಷಾಢ-24 | ಉ.ಆಷಾಢ-24 | ಮೂಲ-24 | ಚಿತ್ತಾ-ಗ್ರ-20 | ಪುಬ್ಬ-ಗ್ರ-25 | ಪುಬ್ಬ-30 | ಪುಬ್ಬ-32 | ಹಸ್ತಾ-ಗ್ರ-25 | ಚಿತ್ತಾ-27 |
| ಉ. ಆಷಾಢ-24 | ಶ್ರವಣ-24 | ಧನಿಷ್ಠ-26 | ಅನುರಾಧ-ಗ್ರ-20 | ಉತ್ತರ-ಗ್ರ-24 | ಉತ್ತರ-1-25 | ಉತ್ತರ-ಗ್ರ-25 | ಚಿತ್ತಾ-ಗ್ರ-29 | ವಿಶಾಖ-24-1-2-3 |
| ಶ್ರವಣ-23 | ಶತಭಿಷಾ-23 | ಶತಭಿಷಾ-24 | ಜೇಷ್ಠಾ-ಗ್ರ-26 | ಹಸ್ತಾ-ಗ್ರ-20 | ಅನುರಾಧ-ಗ್ರ-25 | ಹಸ್ತಾ-ಗ್ರ-26 | ಸ್ವಾತಿ-ಗ್ರ-24 | ಶತಭಿಷಾ-23 |
| ಧನಿಷ್ಠ-22 | ಪೂ.ಭಾದ್ರ-23 | ಪೂ.ಭಾದ್ರ-25 | ಮೂಲ-22 | ಜೇಷ್ಠಾ-ಗ್ರ-20 | ಪೂ.ಆಷಾಢ-25 | ಸ್ವಾತಿ-ಗ್ರ-25 | ವಿಶಾಖ-20-1-2-3 | ಪೂ.ಭಾದ್ರ 4-21 |
| ಉ.ಭಾದ್ರ-30 | ಉ.ಭಾದ್ರ-19 | ಉ.ಭಾದ್ರ-26 | ಪು.ಆಷಾಢ-19 | ಉ.ಆಷಾಢ 24-2 | ಉ.ಆಷಾಢ-22 | ಅನುರಾಧ-ಗ್ರ-20 | ಉ.ಆಷಾಢ24-2-3-4 | ರೇವತಿ-21 |
| ರೇವತಿ-28 | ರೇವತಿ-32 | | ಧನಿಷ್ಠ-3-4-22 | ಪೂ.ಭಾದ್ರ-25 | ಪೂ.ಭಾದ್ರ-4-20 | ಪೂ.ಆಷಾಢ-ಗ್ರ-20 | ಶ್ರವಣ-21 | |
| | | | ಶತಭಿಷಾ-27 | ಉ. ಭಾದ್ರ-22 | ಉ.ಭಾದ್ರ-34 | ಉ.ಆಷಾಢ-21-2-3-4 | ಧನಿಷ್ಠ-21 | |
| | | | ಪೂ.ಭಾದ್ರಾ-4-22 | ರೇವತಿ-32 | ರೇವತಿ-29 | ಶ್ರವಣ-23 | ಪೂ.ಭಾದ್ರ-23-4 | |
| | | | ಉ.ಭಾದ್ರ-27 | | | ಉ.ಭಾದ್ರಾ-31 | ಉ.ಭಾದ್ರಾ-25 | |
| | | | ರೇವತಿ-19 | | | ರೇವತಿ-26 | ರೇವತಿ-30 | |

| | ವಧೂಗಳ ನಕ್ಷತ್ರಗಳು | | | | ವಧೂಗಳ ನಕ್ಷತ್ರಗಳು | | | | |
|---|---|---|---|---|---|---|---|---|---|
| ವರರ ನಕ್ಷತ್ರಗಳು | ಚಿತ್ತಾ-3-4 ತುಲಾರಾಶಿ ರಾಕ್ಷಸ ಗಣ | ಸ್ವಾತಿ ತುಲಾರಾಶಿ ದೇವಗಣ | ವಿಶಾಲ1-2-3 ತುಲಾರಾಶಿ ರಾಕ್ಷಸಗಣ | ವಿಶಾಲ-4 ವೃಶ್ಚಿಕಾ ರಾಶಿ ರಾಕ್ಷಸ ಗಣ | ಅನುರಾಧ ವೃಶ್ಚಿಕಾ ರಾಶಿ ದೇವಗಣ | ಜೇಷ್ಠಾ ವೃಶ್ಚಿಕಾ ರಾಶಿ ರಾಕ್ಷಸ ಗಣ | ಮೂಲ ಧನಸ್ಸು ರಾಶಿ ರಾಕ್ಷಸ ಗಣ | ಪೂರ್ವ ಆಷಾಡ ಧನಸ್ಸು ರಾಶಿ ಮನುಷ್ಯಗಣ | ಉತ್ತರಾಷಾಡ ಧನಸ್ಸು ರಾಶಿ ಮನುಷ್ಯ ಗಣ |
| | ಅಶ್ವಿನಿ-22 | ಅಶ್ವಿನಿ-24 | ಅಶ್ವಿನಿ-22 | ಅಶ್ವಿನಿ-17 | ಅಶ್ವಿನಿ-22 | ಕೃತಿಕಾ -25 | ಭರಣಿ-18 | ಅಶ್ವಿನಿ-ಗ್ರ-23 | ಅಶ್ವಿನಿ-ಗ್ರ-23 |
| | ಕೃತಿಕಾ -28 | ಭರಣಿ-28 | ಭರಣಿ-21 | ಭರಣಿ-16 | ಭರಣಿ-15 | ರೋಹಿಣಿ -20 | ಕೃತಿಕಾ-21 | ಆರಿದ್ರಾ – 23 | ಭರಣಿ-ಗ್ರ-24 |
| | ರೋಹಿಣಿ-25 | ರೋಹಿಣಿ-21 | ಕೃತಿಕ-22 | ಕೃತಿಕಾ-20-1-2-3 | ಕೃತಿಕ-23 | ಮೃಗಶಿರಾ-23 | ಪುಷ್ಯ-25 | ಪುನರ್ವಸು-25 | ಮೃಗಶಿರಾ-20-3-4 |
| | ಆರಿದ್ರಾ-25 | ಮೃಗಶಿರಾ-31 | ಮೃಗಶಿರಾ-25 | ಮೃಗಶಿರಾ-21 | ರೋಹಿಣಿ-27 | ಪುನರ್ವಸು-20-1-2 | ಆಶ್ಲೇಷಾ-30 | ಪುಷ್ಯ-17 | ಆರಿದ್ರಾ-26 |
| | ಪುನರ್ವಸು-22-1-2-3 | ಆರಿದ್ರಾ-26 | ಆರಿದ್ರಾ-25 | ಆರಿದ್ರಾ-20 | ಮೃಗಶಿರಾ-18-1-2 | ಪುಷ್ಯ-28 | ಮುಖೆ-29 | ಆಶ್ಲೇಷಾ-25 | ಪುನರ್ವಸು |
| | ಆಶ್ಲೇಷಾ-24 | ಪುನರ್ವಸು-28 | ಪುನರ್ವಸು-22 | ಪುನರ್ವಸು-24-4 | ಆರಿದ್ರಾ-23 | ಆಶ್ಲೇಷಾ-31 | ಪುಬ್ಬ-26 | ಮುಖೆ-26 | ಪುಷ್ಯ-30 |
| | ಮಖೆ-27 | ಪುಷ್ಯ-25 | ಪುಷ್ಯ-20 | ಪುಷ್ಯ-26 | ಪುನರ್ವಸು-27 | ಮುಖೆ-31 | ಚಿತ್ತಾ-24 | ಪುಬ್ಬ-21 | ಪುಬ್ಬ31 |
| | ಉತ್ತರ-25 | ಪಬ್ಬ-25 | ಮುಖೆ-19 | ಆಶ್ಲೇಷಾ-22 | ಆಶ್ಲೇಷಾ-30 | ಪುಬ್ಬ-22 | ಸ್ವಾತಿ-21 | ಉತ್ತರ-26 | ಉತ್ತರ-23 |
| | ಹಸ್ತಾ-25 | ಉತ್ತರಾ-23 | ಉತ್ತರಾ-25 | ಮುಖೆ-23 | ಪುಷ್ಯ-23 | ಉತ್ತರ-18 | ವಿಶಾಖ-24 | ಹಸ್ತಾ-22 | ಹಸ್ತಾ-25 |
| | ಚಿತ್ತಾ-25 | ಹಸ್ತಾ-35 | ಹಸ್ತಾ-23 | ಪುಬ್ಬ-22 | ಮುಖೆ-24 | ಚಿತ್ತಾ-27 | ಅನುರಾಧ-29 | ಸ್ವಾತಿ-23 | ಅನುರಾಧ-31 |
| | ಸ್ವಾತಿ-ಗ್ರ-27 | ಚಿತ್ತಾ-28 | ಚಿತ್ತಾ-35 | ಉತ್ತರ-1-23 | ಪುಬ್ಬ-21 | ಸ್ವಾತಿ-21 | ಜೇಷ್ಠಾ-24 | ವಿಶಾಖ-26 | ಜೇಷ್ಠಾ-23 |
| | ವಿಶಾಖ-11 | ಸ್ವಾತಿ-ಗ್ರ-25 | ಸ್ವಾತಿ-19 | ಚಿತ್ತಾ-28 | ಉತ್ತರ-27 | ವಿಶಾಖ-33 | ಮೂಲ-25 | ಅನುರಾಧ-20 | ಮೂಲ-28 |
| | ಶ್ರವಣ-ಗ್ರ-1-20 | ವಿಶಾಖ-ಗ್ರ-21 | ವಿಶಾಖ-21-1-2-3 | ಅನುರಾಧ-ಗ್ರ-27 | ಹಸ್ತಾ-27 | ಅನುರಾಧ-30 | ಪೂ.ಆಷಾಢಗ್ರ-28 | ಪುಷ್ಯ-26 | ಪೂ.ಆಷಾಢ-34 |
| | ಶತಭಿಷಾ-23 | ಧನಿಷ್ಠ-ಗ್ರ-23 | ಧನಿಷ್ಠ-ಗ್ರ-23 | ಜೇಷ್ಠಾ-ಗ್ರ-30 | ಸ್ವಾತಿ-30 | ಉ.ಭಾದ್ರ-ಗ್ರ-20 | ಉ.ಆಷಾಢಗ್ರ-25 | ಮೂಲ-28 | ಉ.ಆಷಾಢಗ್ರ-25 |
| | | ಶತಭಿಷಾ-15 | ಶತಭಿಷಾ-ಗ್ರ-23 | ಮೂಲ-ಗ್ರ-24 | ವಿಶಾಖ-24 | ರೇವತಿ-17 | ಉ.ಆಷಾಢ-34 | ಪೂ.ಆಷಾಢಗ್ರ-25 | ಪೂ.ಭಾದ್ರಾಗ್ರ-24 |
| | | ಪೂ.ಭಾದ್ರಾ-23 | | ಧನಿಷ್ಠ-ಗ್ರ-20 | .ಅನುರಾಧ-ಗ್ರ-25 | | ರೇವತಿ-ಗ್ರ-21 | ಶ್ರವಣ-ಗ್ರ-20 | ಉ.ಭಾದ್ರಗ್ರ-24 |
| | | | | | ಜೇಷ್ಠಾ-ಗ್ರ-32 | | ಪೂ.ಭಾದ್ರಗ್ರ-23 | | |
| | | | | | ಪೂ.ಭಾದ್ರಾಗ್ರ-22 | | ರೇವತಿ ಗ್ರ-26 | | |
| | | | | | ಉ.ಭಾದ್ರಾ-13 | | | | |
| | | | | | ರೇವತಿ-26 | | | | |

| ಆದಿನಾಡಿ | ಮಧ್ಯನಾಡಿ | ಅಂತ್ಯನಾಡಿ | ದೇವ | ಮನುಷ್ಯ | ರಾಕ್ಷಸ |
|---|---|---|---|---|---|
| ಅಶ್ವಿನಿ | ಭರಣಿ | ಕೃತಿಕಾ | ಅಶ್ವಿನಿ | ಭರಣಿ | ಕೃತಿಕಾ |
| ಆರಿದ್ರಾ | ಮೃಗಶಿರಾ | ರೋಹಿಣಿ | ಮೃಗ | ರೋಹಿ | ಆಶ್ಲೇಷಾ |
| ಪುನರ್ವಸು | ಪುಷ್ಯ | ಆಶ್ಲೇಷಾ | ಪುನರ್ವಸು | ಆರಿದ್ರಾ | ಮುಖೆ |
| ಉತ್ತರ | ಪುಬ್ಬ | ಮುಖೆ | ಪುಷ್ಯ | ಪುಬ್ಬ | ಚಿತ್ತಾ |
| ಹಸ್ತಾ | ಚಿತ್ತಾ | ಸ್ವಾತಿ | ಹಸ್ತಾ | ಉ.ಭಾದ್ರ | ವಿಶಾಳ |
| ಜೇಷ್ಠ | ಅನುರಾಧ | ವಿಶಾಖ | ಸ್ವಾತಿ | ಪೂ.ಆಷಾಢ | ಜೇಷ್ಠಾ |
| ಮೂಲಾ | ಪುಷ್ಯಾ | ಷಾ | ಅನುರಾಧ | ಉ.ಆಷಾಢ | ಮೂಲ |
| ಶತ | ಧನಿಷ್ಠ | ಶ್ರವಣ | ಶ್ರವಣ | ಪೂ.ಭಾದ್ರ | ಧನಿಷ್ಠ |
| ಪೂ ಭಾದ್ರ | ಉ.ಭಾದ್ರ | ರೇವತಿ | ರೇವತಿ | ಉ.ಭಾದ್ರ | ಶತ |

ಸ್ತ್ರೀ ದೀರ್ಘಕೂಟ : ರಾಶಿ : ಗ್ರಾಮೈತ್ರಿ ಬಂಧರೆ ಸ್ತ್ರೀ ದೀರ್ಘಕೂಟ ಬಾರದಿದ್ದರೂ ದೋಷವಿಲ್ಲ

| ಉತ್ತರಾಷಾಢ 2-3-4 ಮಕರರಾಶಿ ಮನುಷ್ಯಗಣ | ಶ್ರವಣ ಮಕರ ರಾಶಿ ದೇವಗುಣ | ಧನಿಷ್ಠ-1-2 ಮಕರ ರಾಶಿ ರಾಕ್ಷಸ ಗಣ | ಧನಿಷ್ಠ-3-4 ಕುಂಭರಾಶಿ ರಾಕ್ಷಸ ಗಣ | ಶತಭಿಷಾ ಕುಂಭರಾಶಿ | ಪೂರ್ವಭಾದ್ರ 1-2-3 ಕುಂಭರಾಶಿ | ಪೂರ್ವಭಾದ್ರ 4 ಮಿಥುನರಾಶಿ | ಉತ್ತರಾಭಾದ್ರ ಮೀನರಾಶಿ | ರೇವತಿ ಮೀನರಾಶಿ |
|---|---|---|---|---|---|---|---|---|
| ಮೃಗಶಿರಾ-19-1-2 | ರೋಹಿಣಿ-12 | ಕೃತಿಕಾ ಗ್ರ-24 | ಮುಖೆ-27 | ಕೃತಿಕಾ-20 | ಮುಖೆ-21 | ಪುಷ್ಯ-22 | ಆಶ್ವಿನಿ-ಗ್ರ-20 | ಆಶ್ವಿನಿ-ಗ್ರ-23 |
| ಆರಿದ್ರಾ-24 | ಮೃಗಶಿರಾ-25 | ಆಶ್ಲೇಷಾ-24 | ಉತ್ತರ-23 | ಆಶ್ಲೇಷಾ | ಪುಬ್ಬ-24 | ಮುಖೆ-21 | ಪುನರ್ವಸು-24-4 | ಭರಣಿ-ಗ್ರ-30 |
| ಪುನರ್ವಸು-20 | ಆರಿದ್ರಾ-19 | ಮುಖೆ-27 | ಹಸ್ತಾ-23 | ಮುಖೆ-25 | ಉತ್ತರ-21 | ಉತ್ತರ-1-15 | ಆಶ್ಲೇಷಾ-19 | ಪುನರ್ವಸು-25 |
| ಪುಷ್ಯ-26 | ಪುನರ್ವಸು-27 | ಉತ್ತರ-24 | ಕೃತಿಕ-ಗ್ರ-21 | ಪುಬ್ಬ-22 | ಚಿತ್ತಾ-27 | ಚಿತ್ತಾ-21 | ಉತ್ತರ-23 | ಪುಷ್ಯ-ಗ್ರ-25 |
| ಪುಬ್ಬ-26 | ಪುಷ್ಯ-22 | ಹಸ್ತಾ-24 | ಚಿತ್ತಾ-22 | ಚಿತ್ತಾ-31 | ಸ್ವಾತಿ-30 | ಸ್ವಾತಿ-24 | ಹಸ್ತಾ-26 | ಪುಬ್ಬ-20 |
| ಉತ್ತರ-24 | ಪುಬ್ಬ-25 | ಚಿತ್ತಾ-22 | ಸ್ವಾತಿ-25 | ಸ್ವಾತಿ-21 | ವಿಶಾಖ-24 | ವಿಶಾಖ-4-23 | ಸ್ವಾತಿ-26 | ಉತ್ತರ-20 |
| ಹಸ್ತಾ-30 | ಉತ್ತರ-25 | ಸ್ವಾತಿ-25 | ವಿಶಾಖ-25 | ವಿಶಾಖ-31 | ಅನುರಾಧ-25 | ಅನುರಾಧ-29 | ವಿಶಾಖ-4-23 | ಹಸ್ತಾ-24 |
| ಚಿತ್ತಾ-22 | ಹಸ್ತಾ-28 | ವಿಶಾಖ-25 | ಜೇಷ್ಠಾ-23 | ಅನುರಾಧ-19 | ಪೂ.ಆಷಾಢ-27 | ಮೂಲ-17 | ಅನುರಾಧ-20 | ಚಿತ್ತಾ-23 |
| ಸ್ವಾತಿ-23 | ಚಿತ್ತಾ-28 | ಜೇಷ್ಠಾ-23 | ಮೂಲ-30 | ಜೇಷ್ಠಾ-24 | ಉ.ಆಷಾಢ-30 | ಪೂ.ಆಷಾಢ-28 | ಜೇಷ್ಠಾ-26 | ವಿಶಾಖ-4-20 |
| ಅನುರಾಧ-26 | ಸ್ವಾತಿ-21 | ಮೂಲ-30 | ಉ.ಆಷಾಢ-25 | ಮೂಲ-19 | ಶ್ರವಣ-27 | ಉ.ಆಷಾಢ-31 | ಮೂಲ-22 | ಅನುರಾಧ-32 |
| ಮೂಲ-24 | ವಿಶಾಖ-ಗ್ರ-20-1-2-3 | ಉ.ಆಷಾಢ-28 | ಶ್ರವಣ-25 | ಪೂ.ಆಷಾಢ-24 | ಧನಿಷ್ಠ-30 | ಶ್ರವಣ-27 | ಪೂ.ಆಷಾಢ-23 | ಜೇಷ್ಠಾ-25 |
| ಪೂ.ಆಷಾಢ-30 | ಅನುರಾಧ-24 | ಧನಿಷ್ಠ-ಗ್ರ-251-2 | ಧನಿಷ್ಠ-ಗ್ರ-25 | ಉ.ಆಷಾಢಗ್ರ-22 | ಶತಭಿಷಾ-19 | ಧನಿಷ್ಠ-25 | ಉ.ಆಷಾಢ-28 | ಮುಳ-27 |
| ಉ.ಆಷಾಢಗ್ರ-21 | ಜೇಷ್ಠಾ-23 | ಶತಭಿಷಾ-ಗ್ರ-26 | ಶತಭಿಷಾ-ಗ್ರ-33 | ಶ್ರವಣ-25 | ಪೂ.ಭಾದ್ರಾ-24 | ಪೂ.ಭಾದ್ರಾಗ್ರ-20 | ಶ್ರವಣ-30 | ಪೂ.ಆಷಾಢ-26 |
| ಶ್ರವಣ-ಗ್ರ-25 | ಮೂಲ-23 | ಪೂ.ಭಾದ್ರಾ ಗ್ರ-201-2-3 | ಪೂ.ಭಾದ್ರಗ್ರ-27-1-2-3 | ಧನಿಷ್ಠ-30 | | ಉ.ಭಾದ್ರಾಗ್ರ-22 | ಶತಭಿಷಾ-24 | ಉ.ಆಷಾಢ-21 |
| ಧನಿಷ್ಠ-ಗ್ರ-25 | ಪೂ.ಆಷಾಢಗ್ರ-24 | | | ಶತಭಿಷಾ-25 | | ರೇವತಿ ಗ್ರ-28 | ಪೂ.ಭಾದ್ರಾ-25 | ಧನಿಷ್ಠ-23 |
| ಶತಭಿಷಾ-ಗ್ರ-21 | ಉ.ಆಷಾಢ-302-4 | | | ಪೂ.ಭಾದ್ರಾಗ್ರ-19 | | | ಉ.ಭಾದ್ರಾಗ್ರ-25 | ಧನಿಷ್ಠ-23 |
| ಪೂ. ಭಾದ್ರಾಗ್ರ-20 | ಶ್ರವಣ-ಗ್ರ-25 | | | | | | ರೇವತಿ-ಗ್ರ-34 | ಶತಭಿಷಾ-22 |
| ಉ.ಭಾದ್ರಾಗ್ರ-20 | ಶ್ರವಣ-ಗ್ರ-30 | | | | | | | ಪೂ.ಭಾದ್ರಾ-30 |
| | ಶತಭಿಷಾ-ಗ್ರ-20 | | | | | | | ಉ.ಭಾದ್ರ-33 |
| | ಪೂ.ಭಾದ್ರಾಗ್ರ-25 | | | | | | | ರೇವತಿ-ಗ್ರ-25 |



ಶ್ರೀ ನಗರೇಶ್ವರ





ಶ್ರೀ ನಾರಯಣ ಸ್ವಾಮಿ





ದೈವದ ಊಟ

ಸ್ವಾಗತ ಕಾರ್ಯ



ವಧು ವರರ ತಂದೆಯರು ವಿವಾಹಕ್ಕೆ ಒಪ್ಪಿ
ಸಿಹಿ ಹಂಚಿಕೊಳ್ಳುವುದು



ಮದುವೆಯ ನಿಶ್ಚಿತಾರ್ಥ



ಸುರಗಿ ಸುತ್ತುವುದು



ಸುರಗಿ ನೀರು ಹಾಕುವುದು





ವಧು ಗೌರಿ ಪೂಜೆ ಮಾಡುವುದು

ಅರಿಶಿಣ ಮುಹೂರ್ತ



ಕಾಶೀಯಾತ್ರೆಗೆ ಹೊರಡುವುದು



ವಧುವಿನ ತಂದ-ತಾಯಿಯರು
ಅಳಿಯನಕಾಲು ತೊಳೆದು ಕನ್ಯಾಧಾನ ಮಾಡುವರು



ಮಾಂಗಲ್ಯಧಾರಣೆ




ಸಪ್ತಪದಿ

